

ಮುತ್ತು ಬಂದಿದೆ ಕೇರಿಗೆ ಜನರು ಕೇಳಿ
ಭಕ್ತಿಯುಳ್ಳವರೆಲ್ಲ ಕಟ್ಟಿಕೊಳ್ಳಿ ಸೆರಗಿನಲ್ಲಿ

ಥಳಥಳಿಸುವ ಮುತ್ತು ಕಮಲನೇತ್ರದ ಮುತ್ತು
ಕಲುಷ ಪರ್ವತಕ್ಕಿದು ಕುಲಿಶವಾಗಿಪ್ಪ ಮುತ್ತು
ಹಲಧರಾನುಜನೆಂಬ ಪವಿತ್ರನಾಮದ ಮುತ್ತು
ಒಲಿದು ಭಜಿಪರ ಭವತರಿದು ಕಾಯುವ ಮುತ್ತು ॥ 1 ॥

ಅಂಜದಿದ್ದವರಿಗೆ ಅಂಜಿಕೆ ತೋರುವ ಮುತ್ತು
ಭಂಜಿಸಿದ ಇತರ ಭಯವತೋರುವ ಮುತ್ತು
ಸಂಜೀವರಾಯರ ಹೃದಯದೊಳಗಿಹ ಮುತ್ತು
ಕಂಜಭವಾದಿಗಳೇ ಶಿರಸಾವಹಿಸುವ ಮುತ್ತು ॥ 2 ॥

ಜ್ಞಾನವೆಂಬೋ ದಾರದಲ್ಲಿ ಪೋಣಿಸಿ ನೋಡುವ ಮುತ್ತು
ಜ್ಞಾನಿಗಳ ಮನದಲ್ಲಿ ಮೆರೆಯುವ ಮುತ್ತು
ಆನಂದತೀರ್ಥರ ಮನದೊಲೊಪ್ಪುವ ಮುತ್ತು
ಶ್ರೀನಿಧಿ ಆದಿಕೇಶವನೆಂಬೋ ಅಣಿಯ ಮುತ್ತು ॥ 3 ॥

— ಶ್ರೀ ಕನಕದಾಸರು.

ಸಂದರ್ಶಿಸಿ ಅನುಗ್ರಹೀತರಾಗಿ.



# ಶ್ರೀ ಪದ್ಮಾವತೀ ಅಮ್ಮನವರ ಬ್ರಹ್ಮೋತ್ಸವ

# ತಿರುಚಾನೂರು

## ಉತ್ಸವ ಕಾರ್ಯಕ್ರಮ

| ತಾರೀಖು | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 11–11–82 | ಗುರು | — | ಅಂಕುರಾರ್ಪಣೆ |
| 12–11–82 | ಶುಕ್ರ | ಧ್ವಜಾರೋಹಣ | ಚಿಕ್ಕಶೇಷವಾಹನ |
| 13–11–82 | ಶನಿ | ಟಾಂಜಾನ್ ಉತ್ಸವ | ಹಂಸವಾಹನ |
| 14–11–82 | ಭಾನು | ಮುತ್ತಿನ ಪಲ್ಲಕ್ಕಿ ಉತ್ಸವ | ಸಿಂಹವಾಹನ |
| 15–11–82 | ಸೋಮ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 16–11–82 | ಮಂಗಳ | ಪಲ್ಲಕ್ಕಿ ಉತ್ಸವ, ಸಂಜೆ: ವಸಂತೋತ್ಸವ. | **ಗಜವಾಹನ** |
| 17–11–82 | ಬುಧ | ಹನುಮದ್ವಾಹನ | ಗರುಡೋತ್ಸವ |
| 18–11–82 | ಗುರು | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 19–11–82 | ಶುಕ್ರ | **ರಥೋತ್ಸವ** | ಅಶ್ವವಾಹನ |
| 20–11–82 | ಶನಿ | ತೀರ್ಥವಾರಿ, ಚಕ್ರಸ್ನಾನ. | |

ನೀವೂ ಬನ್ನಿ; ನಿಮ್ಮವರನ್ನೂ ಕರೆತನ್ನಿ




ಗೌರವ ಸಂಪಾದಕರು :

ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ :

ಬಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ :

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೩]　　ನವಂಬರ್ ೧೯೮೨　　[ಸಂಚಿಕೆ ೬


# ವಿಷಯಸೂಚಿ




ವಸ್ತುವೊಂದೇ, ವರ್ಣನೆಯಲ್ಲಿ ಭೇದ. ಆತ್ಮ ಒಂದೇ, ಆಕೃತಿಯಲ್ಲಿ ಭೇದ. ಇದು ಬಹುಮಟ್ಟಿಗೆ ಸತ್ಯ ಎನ್ನಿಸುತ್ತದೆ. ವ್ಯಕ್ತಿ ಪರವಾದ ಪರಿಮಿತಿಗಳನ್ನು ಅನುಸರಿಸಿ ಅವಗಾಹನೆಯಲ್ಲಿ ಅಂತರವುಂಟಾಗುತ್ತದೆ. 'ಕಪ್ಯಾಸಂ ಪುಂಡರೀಕಾಕ್ಷಂ' ಎನ್ನುವ ವಾಕ್ಯ ವಿವರಣೆಯಲ್ಲಿ ರಾಮಾನುಜರಿಗೂ ಅವರ ಗುರು ಯಾದವ ಪ್ರಕಾಶರಿಗೂ ಉಂಟಾದ ವಿಭೇದ ನಂತರದಲ್ಲಿ ವಿಶಿಷ್ಟಾದ್ವೈತ ಸ್ಥಾಪನೆಗೆ ನಾಂದಿಯನ್ನು ಹಾಡಿತೆಂಬುದು ತಿಳಿದದ್ದೇ. ಹಾಗಾಗಿ ಒಬ್ಬರಿಗೆ ಸಾಧಾರಣವೆಂಬಂತೆ ಕಂಡುಬರುವ ಯಾವುದೇ ವಿಷಯವೂ ಮತ್ತೊಬ್ಬರಿಗೆ ವಿಶೇಷ ಗುಣಯುತವಾಗಿ ಕಂಡುಬರುವುದರಲ್ಲಿ ಅಚ್ಚರಿಯಿಲ್ಲವೇನೊ.

ದೀಪಾವಳಿ ಎನ್ನುತ್ತಲೇ ಸಾಮಾನ್ಯವಾಗಿ ಕಾಣಿಸುವುದು ಅಳಿಯಂದಿರ ಕೋರಿಕೆಗಳು, ಮಕ್ಕಳ ಸಂಭ್ರಮ, ಹಲವರಿಗೆ ಕಷ್ಟದಿಂದ ಗಳಿಸಿದ್ದು ವ್ಯರ್ಥವಾಗುವುದೆಂಬ ಭಾವವಾದರೆ ಹಲವರು ಈ ದೀಪಾವಳಿ ಅಣ್ಣ ತಂಗಿಯರ ಅನುಬಂಧದ ಸಂಕೇತವೆನ್ನುವರು. ಮಿಗಿಲಾಗಿ ಚತುರ್ದಶಿಯಂದು ಪಿತೃದೇವತೆಗಳನ್ನು ಆಹ್ವಾನಿಸುವ ದೀವಟಿಗೆಗಳೇ ದೀಪಾವಳಿ ಎಂಬುದು ಹಲವು ನಿಷ್ಠಾವಂತರ ಮಾತು. ಒಂದೇ ಹಬ್ಬ ಈ ರೀತಿ ವಿವಿಧ ವಾದಗಳಿಗೆ ಕಾರಕವಾಗಿದೆ.

ಇನ್ನು ದೀಪಾವಳಿಯಲ್ಲಿ ಬೆಳಗುವ ವಸ್ತುಗಳೂ ಅಷ್ಟೆ. ಎಷ್ಟೋ ಹೆಸರುಗಳಲ್ಲಿ ಹಲವು ಹನ್ನೊಂದು ವಸ್ತುಗಳು ತಯಾರಾಗುತ್ತಿದ್ದರೂ ಭೂಚಕ್ರ, ವಿಷ್ಣುಚಕ್ರವೆಂಬುವುಗಳು ನಮ್ಮ ತಾತ್ತ್ವಿಕ ಭಾವನೆಗಳಿಗೆ ಹೆಚ್ಚು ಹತ್ತಿರವೆನಿಸುತ್ತವೆ. ಪುರಾಣ ಕಥೆಯ ಪ್ರಕಾರ ನರಕಾಸುರನು ಭೂದೇವಿ ಹಾಗೂ ವರಾಹಮೂರ್ತಿಗಳಿಗೆ ಜನಿಸಿದ ಪುತ್ರನೆಂದಿದೆ, ವಿಷು ಸಹಸ್ರನಾಮದಲ್ಲಿ ಭೂಮಿಯು ಮಹಾವಿಷ್ಣುವಿನ ಪಾದಸ್ಥಲವಾಗಿ ಹೆಸರಿಸಲ್ಪಟ್ಟಿದೆ. ಹೀಗೆ ಭೂಮಿಗೂ ವಿಷ್ಣುವಿಗೂ ಅವಿನಾಭಾವ ಸಂಬಂಧ. ಅನಾದಿಯಾಗಿ ನಮಗೆ ಪ್ರಕೃತಿಧರ್ಮಗಳೆರಡೇ ಕಾಣಿಸುತ್ತಿವೆ; ಪ್ರಭವ, ಪ್ರಳಯ. ಚರಾಚರ ಜೀವಕೋಟಿಗಳೆಲ್ಲೆಲ್ಲಾ ಇದು ಇರುವುದೇ ಆಗಿದೆ. ಇಷ್ಟು ಸ್ಫುಟವಾಗಿ ಕಾಣಿಸುವ ಇನ್ನೊಂದು ಅಂಶ ಇಲ್ಲವೇ ಇಲ್ಲ. ನಿಜವೆಂದರೆ ಇರುವಿಕೆಯು ನಮಗೆ ತಿಳಿಯುವುದು ಮರಣದ–ಎಂದರೆ ಇಲ್ಲವಾದಾಗಲೇ ಎಂಬುದರಲ್ಲಿ ಆಶ್ಚರ್ಯವಿಲ್ಲ. ಎಂದರೆ ಇವೆರಡು ಕಾಲಚಕ್ರದ ಎರಡು ಕೊನೆಗಳು. ಈ ಅಜ್ಞಾತ ಚಕ್ರ ಹೀಗೇಕೆ ನಡೆಯುತ್ತಿದೆ? ಈ ನಿಯತಿಗೆ ಕಾರಕವಾದ ಶಕ್ತಿ ಯಾವುದಾದರೂ ಇದೆಯೆಂದರೆ ಅದು ನಮಗೆ ಕಾಣಿಸದು. ಈ ಚಕ್ರದ ಸುತ್ತಲೂ ಒಂದು ಮಹತ್ತರ ಮಾಯಾಜ್ವಾಲಾವಲಯವಿದೆ. ಅದರ ಎರಡೂ ಕಡೆಯ ಪ್ರಭವ ಪ್ರಳಯಗಳ ನಡುವೆ ಕುಲಾಲಚಕ್ರದಲ್ಲಿನಂತೆ ತಿರುಗಬೇಕಾದದ್ದೇ. ಆ ಮಾತ್ರದಿಂದ ತಿರುಗಿಸುವವನೇ ಇಲ್ಲವೆನ್ನುವುದು ಕಾರ್ಯಕಾರಣ ವಿರುದ್ಧವಾಗುತ್ತದೆ. ಈ ಜ್ವಾಲಾವಲಯ ಮಧ್ಯಭಾಗದಲ್ಲಿ, ನೀಲಾಭ್ರಮಧ್ಯದಲ್ಲಿ ನವತಟಿತ್ಕಾಂತಿಸಮವಾಗಿ ಆ ಪರಮಶಕ್ತಿಯಿದೆ. ವಿಷ್ಣುಚಕ್ರದಂತೆ ಈ ವಿಶ್ವಚಕ್ರ ಚಾಲಕನೂ ಅಲ್ಲಿಯೇ ಇದ್ದಾನೆ. ಪ್ರಭವ ಪ್ರಳಯಗಳಿಗೆ ಬ್ರಹ್ಮರುದ್ರರು ಅಂಚುಗಳಲ್ಲಿ ತಮ್ಮ ಧರ್ಮವನ್ನು ನಿರ್ವಹಿಸುತ್ತಿದ್ದರೆ ಮಧ್ಯದ ಪರಮಾತ್ಮನು ಅದನ್ನು ನಿಯತಿಯಿಂದ ಪಾಲಿಸುತ್ತಾನೆ.

ದೇವರನ್ನು ಸೇರಬೇಕೆಂಬ ಮಹತ್ತರ ಆಕಾಂಕ್ಷೆ ಇದ್ದವನು ಈ ಮಹಾಮಾಯಾಜ್ವಾಲಾವಲಯವನ್ನು ಒಳಹೊಕ್ಕು ಕೇಂದ್ರವನ್ನು ಸೇರುವನು. ಅಲ್ಲಿಗೆ ಸೇರಿದ ಜೀವನು ತಿರುಗುವವನಾಗದೆ ತಿರುಗಿಸುವವನಲ್ಲಿ ಒಂದಾಗಿ ಸೇರುತ್ತಾನೆ. ಅದಕ್ಕಾಗಿ ಮಹನೀಯರುಗಳಾದ ಋಷಿಮುನಿಗಳು ಅನೇಕ ಮಾರ್ಗಗಳನ್ನು ಬೋಧಿಸಿದ್ದಾರೆ.

ಸತ್ಯಭಾಮಾ ಸಹಾಯದಿಂದ ಶ್ರೀಕೃಷ್ಣನು ನರಕನನ್ನು ಕೊಂದ ದಿನವಲ್ಲವೇ ನರಕಚತುರ್ದಶಿ ಎನ್ನಬಹುದು. ಅಲ್ಲವೆನ್ನುವವರೇ ಹೆಚ್ಚುಮಂದಿ, ಮನುಷ್ಯಪ್ರವೃತ್ತಿಯನ್ನು ಅನುಸರಿಸಿ, ಮನ ಸ್ವರ್ಗನರಕಗಳಾಗುತ್ತವೆ. ಮನುಷ್ಯನನ್ನು ಕೀಳಾಗಿ ಕಾಣುವ ಪ್ರತಿ ವ್ಯಕ್ತಿಯೂ ಸಮಾಜಕ್ಕೆ ನರಕನೇ ಹೌದು. ಅವನು ಹದ್ದು ಮೀರಿ ಸಮಾಜ ವಿಕಾಸಕ್ಕೆ ಅಡ್ಡಿಯಾದಾಗ ಸಮಾಜದ ಆವೇದನೆ ಶಕ್ತಿವಂತವಾಗಿ ಎದ್ದುನಿಂತು 'ಧರ್ಮಸ್ಯ ಪ್ರಭುರಚ್ಯುತಃ' ಎಂಬಂತೆ ಅಂತಹ ನರಕಾಸುರನನ್ನು ನಾಶಗೊಳಿಸುತ್ತದೆ. ಇದೇ ವಿಷ್ಣುಚಕ್ರದ ಕಥೆ–ನಮ್ಮ 'ಮುಖ'ಚಿತ್ರ ಕಥೆ.

ಅಸತೋಮಾ ಸದ್ಗಮಯ
ತಮಸೋಮಾ ಜ್ಯೋತಿರ್ಗಮಯ
ಮೃತ್ಯೋರ್ಮಾ ಅಮೃತಂಗಮಯ

ಓಂ ಶಾಂತಿ ಶಾಂತಿ ಶಾಂತಿಃ

ಕಂಪಲಾಪುರದ

# ಶ್ರೀ ಕರಕಂಠೇಶ್ವರ ದೇವಾಲಯ

ಕರ್ನಾಟಕದ ಮೈಸೂರು ನಗರದಿಂದ ಸುಂದರ ಕೊಡಗುಜಿಲ್ಲೆಯ ಮಡಿಕೇರಿಗೆ ಹೋಗುವ ರಾಜ್ಯ ಹೆದ್ದಾರಿ ರಸ್ತೆಯಲ್ಲಿ ಸುಮಾರು 35 ಮೈಲಿ ದೂರ ಬಂದರೆ ಸಿಗುವ ಸೌಂದರ್ಯ ತುಂಬಿದ ಪುಟ್ಟ ಊರೇ "ಕಂಪಲಾಪುರ".

ಯಾವ ಗಲಭೆ ಗದ್ದಲವೂ ಇಲ್ಲದ ಒಂದಾನೊಂದು ಕಾಲದಲ್ಲಿ ಪಾಳೇಗಾರರಿಂದ ಆಳಲ್ಪಟ್ಟ ಪಿರಿಯಾಪಟ್ಟಣ ತಾಲ್ಲೂಕಿನ ಗರ್ಭದಲ್ಲಿ ಅಡಗಿರುವ ಈ ಊರಿನಲ್ಲಿ ಭಾನುವಾರ ನಡೆಯುವ ಸಂತೆ ಮೈಸೂರುಜಿಲ್ಲೆಯಲ್ಲಿ ನಡೆಯುವ ಇತರ ಊರುಗಳ ದೊಡ್ಡ ಸಂತೆಗಳ ಸಾಲಿನಲ್ಲಿ ಸೇರಿಸಲ್ಪಟ್ಟಿದೆ.

ಕಂಪಲಾಪುರದ ಪೂರ್ವಕ್ಕೆ ವಿಶಾಲವಾದ ಹೊಲಗಳ ಸಮೂಹ, ಈ ಹೊಲಗಳ ಮಧ್ಯೆ ಇರುವ ಮಣ್ಣಿನ ಅರ್ಧಫರ್ಲಾಂಗ್ ರಸ್ತೆಯನ್ನು ಸವೆಸಿ ಹೋದರೆ ಕಾಣಸಿಗುವುದೇ ಚೋಳರು ಒಂದೇ ರಾತ್ರಿಯಲ್ಲಿ ನಿರ್ಮಿಸಿದ ಮುಗ್ಧಗೊಳಿಸುವ ಕೆತ್ತನೆಯ ಕೌಶಲ್ಯದಿಂದ ತುಂಬಿರುವ ಶ್ರೀಕರ ಕಂಠೇಶ್ವರ ದೇವಾಲಯ. ಹೊರನೋಟಕ್ಕೆ ಹಾಲಿನಂತಹ ಬಣ್ಣ ಹೊಂದಿರುವ ಪೌಳಿ, ಇದರ ಪ್ರತಿಮೂಲೆಯಲ್ಲೂ ದೇವಾಲಯವನ್ನು ರಕ್ಷಿಸಲು ಕಾದಿರುವಂತೆ ಕಾಣುವ ಬಸವ, ಪ್ರವಾಸಿಗರನ್ನು ಸೆರೆ ಹಿಡಿಯುತ್ತವೆ.

ಕೊಡಗು ಜಿಲ್ಲೆ ವೀರಾಜಪೇಟೆಯ ಓರ್ವ ಶ್ರೀಮಂತನಿಗೆ ಬಹಳ ವರ್ಷಗಳಿಂದ ಸಂತಾನವೇ ಆಗಲಿಲ್ಲ. ಆಗ ಕಂಪಲಾಪುರದ ಹಿರಿಯರೊಬ್ಬರು ಶ್ರೀಕರಕಂಠೇಶ್ವರನಿಗೆ ಹರಕೆ ಹೊತ್ತರೆ, ಸಂತಾನವಾಗುತ್ತದೆ ಎಂದು ಹೇಳಿದಾಗ ಆ ಶ್ರೀಮಂತ "ತನಗೆ ಸಂತಾನದ ಫಲ ನೀಡಿದರೆ ಶ್ರೀಕರಕಂಠೇಶ್ವರನ ದೇವಾಲಯಕ್ಕೆ ಪೌಳಿ ಕಟ್ಟಿಸುತ್ತೇನೆ" ಎಂದು ಹರಕೆ ಹೊತ್ತನು.

ದಯಾಮಯಿ, ಎರಡನೇಕಾಶಿಯೆಂದು ಜನತಾಭಕ್ತರಿಂದ ಕರೆಸಿಕೊಂಡ ಶ್ರೀಕರಕಂಠೇಶ್ವರನಿಗೆ ಶ್ರೀಮಂತನ ಮೊರೆ ಕೇಳಿಸಿತು. ನವಮಾಸದಲ್ಲಿ ಶ್ರೀಮಂತ ಮುದ್ದಾದ ಗಂಡು ಮಗುವಿನ ತಂದೆಯಾದ. ಕೊಟ್ಟ ಮಾತಿನಂತೆ ಆತ ಸುಂದರವಾದ "ಸುತ್ತು ಗೋಡೆ"ಯನ್ನು ನಿರ್ಮಿಸಿಕೊಟ್ಟನು.

ದೇವಾಲಯ ಉದಯಿಸಿದ್ದೇ ಒಂದು ಅತಿಶಯವಾದ ವಿಷಯ ಈಗ ಇರುವ ದೇವಾಲಯದ ಜಾಗ ಬರಡಾಗಿತ್ತು. ಒಂದು ಬೆಳಿಗ್ಗೆ ಊರಿನವರಿಗೆ ಊಹಿಸಲೂ ಸಾಧ್ಯವಾಗದ ಅಚ್ಚರಿ ಕಾದಿತ್ತು. ಅದುವೇ ಈ ದೇವಾಲಯದ ಉದಯ. ಖಾಲಿಯಾಗಿದ್ದ ಹೊಲದ ಜಾಗದಲ್ಲಿ ಸುಂದರ ದೇವಾಲಯವನ್ನು ಕಲ್ಲಿನಿಂದಲೇ ರಾತ್ರೋರಾತ್ರಿ ಕಟ್ಟಿ ಯಾರಿಗೂ ತಿಳಿಯದಂತೆ ತಮ್ಮ ಕೈ ಚಳಕ ತೋರಿಸಿದವರು ಚೋಳರೆಂದು ತಿಳಿಯಲು ಊರಿನವರಿಗೆ ಕಷ್ಟವೆನಿಸಲಿಲ್ಲ. ಅಂದಿನ ಕಾಲದಲ್ಲಿ ಚೋಳರಲ್ಲದೆ ಮತ್ಯಾರೂ ಈ ರೀತಿ ಒಂದೇರಾತ್ರಿಯಲ್ಲಿ ಭವ್ಯಸುಂದರ ದೇವಾಲಯ ಕಟ್ಟುವುದು ಸಾಧ್ಯವಿಲ್ಲ, ಎಂದು ಒಂದುವರ್ಗದ ಜನ ಅಭಿಪ್ರಾಯಪಟ್ಟರೆ, ಇದು ಶಿವನ ಸೃಷ್ಟಿ ಎನ್ನುವ ಮಂದಿಗೇನೂ ಕಡಿಮೆಯೇನಿಲ್ಲ. ಒಂದು ವೇಳೆ ಚೋಳರೇ ಈ ದೇವಾಲಯ ನಿರ್ಮಿಸಿರುವುದಾದರೆ ಒಂದೇರಾತ್ರಿಯಲ್ಲಿ ದೊಡ್ಡ ದೊಡ್ಡ ಕಲ್ಲಿನ ಚಪ್ಪಡಿ, ಬಂಡೆ, ಎಲ್ಲಿಂದ ತಂದರು ? ಒಟ್ಟಿನಲ್ಲಿ ಇದು ಒಂದು ಸಮಸ್ಯೆಯಾಗಿಯೇ ಉಳಿದಿದೆ.

ದೇವಾಲಯದ ಪ್ರವೇಶದ್ವಾರವನ್ನು ದಾಟಿ ಒಳಹೊಕ್ಕಾಗ ಪ್ರವಾಸಿಗರನ್ನು ಮೊದಲು ಆಕರ್ಷಿಸುವುದು, ಎಡಬಲಗಳಲ್ಲಿ ನಿಂತಿರುವ ನಾಲ್ಕು ಅಡಿ ಎತ್ತರದ ಕಲ್ಲಿನ ದ್ವಾರಪಾಲಕರು. ದೇವಾಲಯದ ಸುತ್ತಲಿನ ವಿಶಾಲವಾದ ಆವರಣ ಸಿಮೆಂಟ್ ನೆಲದಿಂದ ಕಂಗೊಳಿಸುತ್ತದೆ. ಆವರಣದ ನೈರ್ಮಲ್ಯ ಹಾಗೂ ಶುಚಿ ಮನಸ್ಸಿಗೆ ಹಿತ, ನೆಮ್ಮದಿ, ಹರ್ಷ ತರುತ್ತದೆ.

ಸಂಪ್ರದಾಯಕವಾಗಿ ಪೂರ್ವಾಭಿಮುಖವಾಗಿರುವ ದೇವಾಲಯದ ಗರ್ಭಗುಡಿಯಲ್ಲಿ ಕಾಣುವುದೇ ಶ್ರೀ ಕರಕಂಠೇಶ್ವರಲಿಂಗ. ಲಿಂಗದ ಮುಂದೆ ನಾಗರಾಜ (ಸರ್ಪ ನಿಂತಿರುವ ಕರ್ಷಕಣಿಸುವ ಪ್ರತಿಮೆ), ದೇವರ ಶಕ್ತಿ, ಇವುಗಳು ಗರ್ಭಗುಡಿಯ ವೈಶಿಷ್ಟ್ಯತೆಗಳು. ಗರ್ಭಗುಡಿಯನ್ನು ಈಗಲೂ ಸಹಾ ಜೀವಂತ ನಾಗರ ಹಾವೊಂದು ರಕ್ಷಿಸುತ್ತಿರುವುದು ಮತ್ತೊಂದು ವೈಶಿಷ್ಟ್ಯವಾದರೂ ಇದುವರೆಗೂ ನಾಗರಹಾವು ದೇವಾಲಯಕ್ಕೆ ಬರುವ ಯಾವ ಭಕ್ತರಿಗೂ ತೊಂದರೆ ಕೊಟ್ಟಿದ್ದಿಲ್ಲ.

ಗರ್ಭಗುಡಿಯ ಎದುರು ನಿಂತಿರುವ ಗರುಡಗಂಬ, ಇದರ ಸನಿಹದಲ್ಲಿ ಗಣಪತಿ ವಿಗ್ರಹ ರಮ್ಯವಾಗಿ ತೋರುತ್ತವೆ. ಏಳು ಅಡಿ ಎತ್ತರದ, ನಾಲ್ಕು ಅಡಿ ಅಗಲವಿರುವ ಶಾಸನದಿಂದ ಕೂಡಿರುವ ಕೆತ್ತನೆಯ ಶಿಲ್ಪಗಳು ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುವಂತಹವು. ಶಿವಲಿಂಗವನ್ನು ಶ್ರೀರಾಮ ಪೂಜಿಸುತ್ತಿರುವಾಗ ವಾನರರು ಭಯ ಭಕ್ತಿಯಿಂದ ಕುಳಿತಿರುವ ಭಂಗಿ ಹೊರರಾಜ್ಯದ ಪ್ರವಾಸಿಗರನ್ನೂ ಸಹಾ ವಿಸ್ಮಯಗೊಳಿಸಿದೆ.

ಪ್ರತಿವರ್ಷ ಇಲ್ಲಿ ನಡೆಯುವ ಮಹಾರುದ್ರಾಭಿಷೇಕಕ್ಕೆ ನೂರಾರು ಮೈಲಿ ದೂರದಿಂದ ಲಕ್ಷಾಂತರಮಂದಿ ಭಕ್ತರು ಬಂದು ಸೇರುತ್ತಾರೆ. ಆ ಸಾಗರದಂತಹ ಜನಸಂಖ್ಯೆಯನ್ನು ಈ ಪುಟ್ಟಗ್ರಾಮದಲ್ಲಿ ನೋಡಲು ಹರ್ಷವೆನಿಸುತ್ತದೆ.

ದೇವಾಲಯದ ಒಳಗಡೆ ಇರುವ ಬಾವಿಯ ನೀರು ಅತಿಸಿಹಿಯಾಗಿದ್ದು. ಈ ನೀರು ಕುಡಿದು ರೋಗ ರುಜಿನಗಳಿಂದ ಪಾರಾದ ಪವಾಡಗಳೂ ನಡೆದಿವೆ. ದೇವಾಲಯದ

**ಶ್ರೀ ಕಂಪ್ಲಾಪುರ ಮೋಹನ**

# ತಿರುಮಲೆ

## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇ.**

ಹೆಸರಿನಲ್ಲಿ ಹತ್ತಾರು ಎಕರೆ ಜಮೀನಿದ್ದ. ಅರ್ಚಕರು ಓಲಗದವರು. ತಮಟೆಹೊಡೆಯುವವರಿಗೆ ಜೀವನಾಧಾರಕ್ಕೆ ನೀಡಲಾಗಿದೆ.

ಕಂಪಲಾಪುರದ ಇತಿಹಾಸದಲ್ಲೇ ನಡೆಯದ ಒಂದು ಅಪೂರ್ವಘಟನೆ ನಡೆಯಿತು. ಸುಮಾರು ಮೂರು ವರ್ಷಗಳು ಮಳೆಯೇ ಬಾರದೆ ಜನರೆಲ್ಲಾ ಕಂಗಾಲಾದರು. ದನಕರುಗಳು ಸಾಯತೊಡಗಿದವು. ಕೆರೆ, ಬಾವಿಗಳಲ್ಲಿ ನೀರು ಬತ್ತಿತು. ನೆಲ ಬಾಯ್ಬಿಡತೊಡಗಿತು. ಮುಂದೇನು ? ಎಂಬ ದೊಡ್ಡ ಚಿಂತೆ ಊರವರನ್ನು ಕಾಡಿತು. ಕೊನೆಗೆ ಊರಜನರೆಲ್ಲಾ ಶ್ರೀಕರಕಂರೇಶ್ವರಸ್ವಾಮಿಯ ಮೊರೆಹೊಕ್ಕು 1976 ರಲ್ಲಿ ಸಹಸ್ರನಾಮಾರ್ಚನೆ, ಮಹಾರುದ್ರಾಭಿಷೇಕ ನಡೆಸಿ ಭಕ್ತಿಯ ಧಾರೆ ಎರೆದರು.

ಕಾಕತಾಳೀಯ ನ್ಯಾಯವೋ, ಅಥವಾ ಭಕ್ತರ ಮೊರೆ, ದೇವನಾಥನಿಗೆ ಕೇಳಿಸಿತೋ ಮಳೆ ಹನಿಹನಿಯಾಗಿ ಬಿದ್ದು ಹತ್ತಾರು ದಿನಗಳು ಎಡೆಬಿಡದೆ ಭಕ್ತರನ್ನು ತಣಿಸಿದ್ದೇ ಅಲ್ಲದೆ, ಕೆರೆಭಾವಿಗಳೆಲ್ಲಾ ತುಂಬಿಹೋದವು ಅಂದಿನಿಂದ ಇಂದಿನವರೆಗೂ ಕಂಪಲಾಪುರ 'ಕಂಪು' ಸೂಸುತ್ತಲೇ ಇದೆ.

ದೇವಾಲಯಕ್ಕೆ 'ರಕ್ಷಣಾಸಮಿತಿ' ಯೊಂದಿದ್ದು ಪ್ರತಿವರ್ಷವೂ ಜೀರ್ಣೋದ್ಧಾರ ನಡೆಯುತ್ತಿದೆ. ಈ ದೇವಾಲಯ ನೋಡಲು ಹಗಲಿನ ಯಾವ ವೇಳೆಯಲ್ಲಿ ಬೇಕಾದರೂ ಬರಬಹುದು. ಈ ಕ್ಷೇತ್ರವನ್ನು ಮತ್ತಷ್ಟು ಅಭಿವೃದ್ಧಿಗೊಳಿಸಿ ಸೌಕರ್ಯಗಳನ್ನೊದಗಿಸಿದರೆ ಇನ್ನೂ ಹೆಚ್ಚು ಮಂದಿಯನ್ನು ಆಕರ್ಷಿಸಬಲ್ಲದು. ಇದಕ್ಕೆ ಸರಕಾರ, ಮುಜರಾಯಿ ಇಲಾಖೆ ಆಸಕ್ತಿವಹಿಸಬೇಕು. ಅಷ್ಟೇ ಅಲ್ಲದೆ ಈ ದೇವಾಲಯದಲ್ಲಿರುವ ಲಿಪಿಯನ್ನು ಪ್ರಾಚ್ಯವಸ್ತು ಇಲಾಖೆಯವರು ಗಮನಿಸಿಲ್ಲದಿರುವುದು ಆಶ್ಚರ್ಯಕರ.



# ಪುರಂದರದಾಸರ ಹಾಡುಗಳಲ್ಲಿ ಹಾಸ್ಯ

"ದಾಸರೆಂದರೆ ಪುರಂದರದಾಸರಯ್ಯಾ" ಎಂದು ತಮ್ಮ ಗುರುಗಳಾದ ಶ್ರೀ ವ್ಯಾಸರಾಯ ಯತಿಗಳಿಂದಲೇ ಪ್ರಶಂಸೆಯನ್ನು ಪಡೆದವರು ಪುರಂದರದಾಸರು. ಈ ಪ್ರಶಂಸೆ ಎಳ್ಳಷ್ಟೂ ಉತ್ಪ್ರೇಕ್ಷೆಯಾದುದಲ್ಲ. ಪುರಂದರದಾಸರು ತಮ್ಮ ಅಸಂಖ್ಯಾತ ಹಾಡುಗಳ ಮೂಲಕ ಜನಜೀವನದ ಎಲ್ಲ ಮುಖಗಳ ಒಳಹೊರಗುಗಳನ್ನೂ ಶೋಧಿಸಿ, 'ಅಲ್ಲ' ಅನಿಸಿದ್ದನ್ನು ನಿರ್ಭಿಡೆಯಿಂದ ಖಂಡಿಸಿ, 'ಹೌದು' ಅನಿಸಿದ್ದನ್ನು ಮುಕ್ತಕಂಠದಿಂದ ಹೊಗಳಿ ಹರಸಿದವರು. ಅವರ ಹಾಡುಗಳಲ್ಲಿ ಭಕ್ತಿ, ಜ್ಞಾನ, ವೈರಾಗ್ಯ ಇವು ಹೇಗೆ ಸಮೃದ್ಧವಾಗಿ ಹೊರಹೊಮ್ಮಿವೆಯೋ ಹಾಗೆಯೇ ಹಾಸ್ಯ ವಿಡಂಬನೆಗಳು ಕೂಡ ಹಾಸುಹೊಕ್ಕಾಗಿ ಬಂದಿವೆ. ದಾಸರು ಕೆರಳಿದಾಗ ಯಾರನ್ನೂ ಬಿಡುವವರಲ್ಲ. ತಮ್ಮನ್ನು ತಾವೇ ವಿಡಂಬಿಸಿಕೊಳ್ಳುವುದರಿಂದ ಹಿಡಿದು, ತಮ್ಮ ಆರಾಧ್ಯದೈವ ಪುರಂದರ ವಿಠಲನನ್ನು ಹಂಗಿಸುವುದರ ತನಕ ಪುರಂದರದಾಸರ ಲೇಖನಿ ಓಡಿದೆ.

## ಸ್ವ-ವಿಮರ್ಶೆ :

ದಾಸರು ಒಂದು ಪ್ರಸಂಗದಲ್ಲಿ ತಮ್ಮ ವ್ಯಕ್ತಿತ್ವವನ್ನು ತಾವೇ ಅಳೆದುಕೊಂಡದ್ದು ಹೀಗೆ;

ದಾಸನೆಂತಾಗುವೆನು ಧರೆಯೊಳಗೆ ನಾನು।  
ವಾಸುದೇವನಲಿ ಲೇಶ ಭಕುತಿ ಕಾಣೆ।  
ಗೂಟನಾಮವ ಹೊಡೆದು।  
ಗುಂಡು ತಂಬಿಗೆ ಹಿಡಿದು।  
ಗೋಟಂಚು ಧೋತರ ಮಡಿಯುಟ್ಟು।  
ದಾಟುಗಾಲಿಡುತ ನಾ ಧರೆಯೊಳಗೆ ಬರಲೆನ್ನ।  
ಬೂಟಕತನ ನೋಡಿ ಭ್ರಮಿಸದಿರಿ ಜನರೆ।

ಎಂದು ತಮ್ಮ ವೇಷ ಭೂಷಣವನ್ನು, ರೀತಿ ನೀತಿಗಳನ್ನು ತಾವೇ ವಿಡಂಬಿಸಿಕೊಂಡಿದ್ದಾರೆ. ಅಲ್ಲದೆ ತಮ್ಮ ಪೂರ್ವ ವೃತ್ತಾಂತವನ್ನು, ಆಗಿನ ತಮ್ಮ ಜಿಪುಣತನವನ್ನು ನೆನೆದುಕೊಂಡು ಹೀಗೆ ಹೇಳಿದ್ದಾರೆ.

ಹರಿಕೊಟ್ಟ ಕಾಲಕ್ಕೆ ಉಣಲಿಲ್ಲ।  
ಹರಿಕೊಡದ ಕಾಲಕ್ಕೆ ಬಾಯಿ  
ಬಿಡುವೆಯಲ್ಲೋ ಪ್ರಾಣಿ।  
ಹತ್ತುಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು!  
ಮತ್ತೆ ಉಪ್ಪಿಲ್ಲದೆ ಉಂಡ್ಯಲ್ಲೋ ಪ್ರಾಣಿ।  
ಹತ್ತುಸಾವಿರ ಹೊನ್ನು ತಿಪ್ಪೇಲಿ ಪೋಪಾಗ।  
ಮೃತ್ತಿಕೆ ಬಾಯಲ್ಲಿ ಬಿತ್ತಲ್ಲೋ ಪ್ರಾಣಿ।  
ನೆಂಟರಿಷ್ಟರು ಬಂದು ಮನೆಯ ಮುಂದೆ  
ಕುಳಿತಿರಲು।  
ಕಂಟಸುದ್ದಿ ನೀನಾಡಿದ್ಯಲ್ಲೋ ಪ್ರಾಣಿ।

ಅವರ ಹಿಂದಿನ ಜಿಪುಣತನದ ಮಾರ್ಮಿಕವಾದ ವಿಡಂಬನೆ ಇಲ್ಲಿದೆ. ಜಡ ಸಂಪತ್ತಿನ ನಶ್ವರತೆಯನ್ನು ಒತ್ತಿಹೇಳುವ ತವಕವೂ ಇಲ್ಲಿದೆ. ಇಷ್ಟೆಲ್ಲ ದೀನತನದಿಂದ ಬಾಳಿದ ಶ್ರೀನಿವಾಸ ನಾಯಕರು ಜ್ಞಾನೋದಯವಾದಾಗ ಎಲ್ಲ ಸಂಪತ್ತನ್ನೂ ತ್ಯಜಿಸಿ, ಪ್ರಪಂಚದಲ್ಲಿ ಭಗವಂತನಲ್ಲಿ ಇಡುವ ಭಕ್ತಿಯೊಂದೇ ಶಾಶ್ವತ ಎಂಬ ನಿತ್ಯ ಸತ್ಯವನ್ನರಿತು ಪುರಂದರದಾಸರಾಗಿ ಹೊರಬಂದರು. ಆಗ ಅವರ ಬಾಯಿಂದ ಹೊರಟ ಹಾಡು ಇದು.

ಆದದ್ದೆಲ್ಲ ಒಳಿತೇ ಆಯಿತು।  
ನಮ್ಮ ಶ್ರೀಧರನ ಸೇವೆಗೆ ಸಾಧನ  
ಸಂಪತ್ತಾಯಿತು।  
ದಂಡಿಗೆ ಬೆತ್ತ ಹಿಡಿಯುವುದಕ್ಕೆ।  
ಮಂಡೆ ಬಾಗಿ ನಾಚುತ್ತಿದ್ದೆ।  
ಹೆಂಡತಿ ಸಂತತಿ ಸಾವಿರವಾಗಲಿ।  
ದಂಡಿಗೆ ಬೆತ್ತ ಹಿಡಿಸಿದಳಯ್ಯ।  
ಗೋಪಾಳಬುಟ್ಟಿ ಹಿಡಿಯುವುದಕ್ಕೆ।  
ಭೂಪತಿಯಂತೆ ಗರ್ವಿಸುತ್ತಿದ್ದೆ।  
ಆ ಪತ್ನೀಕುಲ ಸಾವಿರವಾಗಲಿ।  
ಗೋಪಾಳಬುಟ್ಟಿ ಹಿಡಿಸಿದಳಯ್ಯ।  
ತುಳಸೀಮಾಲೆಯ ಹಾಕುವುದಕ್ಕೆ ಅರಸನಾಗಿ  
ನಾಚುತ್ತಿದ್ದೆ  
ಸರಸಿಜಾಕ್ಷ ಪುರಂದರವಿಠಲನು।  
ತುಳಸೀಮಾಲೆಯ ಹಾಕಿಸಿದನು।

ತಮ್ಮನ್ನು ಸರಿದಾರಿಗೆ ತಂದ ತಮ್ಮ ಸತಿಯನ್ನು ಇಲ್ಲಿ ಸ್ಮರಿಸಿದ್ದಾರೆ. ದಾಸರು ಹರಿಯ ಭಕ್ತಿಯನ್ನು ಈ ಪರಿಯಾಗಿ ಗಳಿಸಿದ ನಂತರ ಅವನನ್ನು ಕೇಳಿಕೊಳ್ಳುವುದಿಷ್ಟೆ "ನನಗೂ ಆಣೆ ರಂಗ ನಿನಗೂ ಆಣೆ। ನನಗೂ ನಿನಗೂ ಇಬ್ಬರಿಗೂ ನಿನ್ನ ಭಕ್ತರ ಆಣೆ। ನಿನ್ನ ಬಿಟ್ಟು ಅನ್ಯರ ಭಜಿಸಿದರೆ ನನಗೆ ಆಣೆ। ನನ್ನ ನೀನು ಒಲಿಯದಿದ್ದರೆ ನಿನಗೆ ಆಣೆ" ದಾಸರಿಗೆ ಭಗವಂತನಲ್ಲಿದ್ದ ಅನನ್ಯ ಪ್ರೇಮಕ್ಕೆ ಸಾಕ್ಷಿಯಾಗಿದೆ ಈ ರಚನೆ.

ಹೀಗೆ ತಮ್ಮ ಹಲವು ಹಾಡುಗಳಲ್ಲಿ ಪುರಂದರದಾಸರು ತಮ್ಮನ್ನು ತಾವೇ ವಿಡಂಬಿಸಿಕೊಂಡು, ತಮ್ಮಲ್ಲಿ ಹಿಂದೆ ಇದ್ದ ದೀನತನವನ್ನು ಹಾಗೂ ಈಗಲೂ ಸ್ವಲ್ಪಮಟ್ಟಿಗೆ ಇದ್ದಿರಬಹುದಾದ ಡಾಂಭಿ



ಶ್ರೀ ಪ್ರಾಣೇಶಗುಡಿ

ಕೆಯನ್ನು ವಿಮರ್ಶಿಸಿಕೊಂಡು ನಗೆಯಾಡಿದ್ದಾರೆ. ಇಂಥ ಸ್ವ – ವಿಮರ್ಶೆಯನ್ನು ಇಂದು ನಾವು ಎಷ್ಟು ಜನರಲ್ಲಿ ಕಾಣುತ್ತೇವೆ?

## ಬೂಟಾಟಿಕೆಯ ಭಕ್ತಿಯ ವಿಡಂಬನೆ :

ಬೂಟಾಟಿಕೆಯ ಭಕ್ತರ ಸೋಗಿನ ನಡವಳಿಕೆಯನ್ನು ಕಂಡು ಪುರಂದರದಾಸರು ಕಿಡಿ ಕಿಡಿಯಾದ ರೀತಿ ಹೀಗಿದೆ

ಉದರ ವೈರಾಗ್ಯವಿದು ।
ನಮ್ಮ ಪದುಮನಾಭನಲಿ ಲೇಶ ಭಕುತಿಯಿಲ್ಲ ।
ಉದಯಕಾಲದಲ್ಲೆದ್ದು ಗಡಗಡ ನಡುಗುತ ।
ನದಿಯಲಿ ಮಿಂದೆನೆಂದು ಹಿಗ್ಗುತಲಿ ।
ಮದಮತ್ಸರ ಕ್ರೋಧ ಒಳಗೆ ತುಂಬಿಟ್ಟು ಕೊಂಡು ।
ಬದಿಯಲ್ಲಿದ್ದವರಿಗಾಶ್ಚರ್ಯವ ತೋರುತ ।
ಕರದಲ್ಲಿ ಜಪಮಣಿ ಬಾಯಲ್ಲಿ ಮಂತ್ರವು ।
ಅರಿವು ಮುಸುಕು ಮೋರೆಗೆ ಹಾಕಿ ।
ಪರಸತಿಯರ ಗುಣ ಮನದಲ್ಲಿ ಸ್ಮರಿಸುತ ।
ಪರಮ ವೈರಾಗ್ಯಶಾಲಿಯೆಂದೆನಿಸುತ ।
ಬೂಟಕತನದಲಿ ಬಹಳ ಭಕುತಿಯ ಮಾಡಿ ।
ತನಗಿನ್ನು ಸರಿಯಾರಿಲ್ಲೆನಿಸಿ ।
ನಾಟಕ ಸ್ತ್ರೀಯಂತೆ ಬಯಲು ಡಂಭವ ತೋರಿ ।

ಸುಲಭವಾಗಿ ಅರ್ಥವಾಗದ, ಶಾಬ್ದಿಕ ದೊಂಬರಾಟವನ್ನು ತೋರದೆಯೇ, ಸರಳವಾದ ಪದಗಳನ್ನು ಬಳಸಿ, ದಿನನಿತ್ಯ ನಾವು ಕಾಣುವ ಘಟನೆಗಳನ್ನೇ ಉದಾಹರಿಸಿ ಈ ಪದ್ಯವನ್ನು ರಚಿಸಿದ್ದಾರೆ ದಾಸರು. ತೀಕ್ಷ್ಣವಾದ ವ್ಯಂಗ್ಯ ಇಲ್ಲಿ ಮಿಂಚಿದೆ. ಡಾಂಭಿಕ ಭಕ್ತರನ್ನು ವಿಡಂಬಿಸಿದ ಅವರ ಇತರ ಹಾಡುಗಳೂ ಚುರುಕು ಮುಟ್ಟಿಸುವಂತಿವೆ.

ಮರುಳಾಟವೇಕೋ ಮನುಜ ಕೂಗಾಟವೇಕೋ ।
ಸರ್ವ ದುರ್ಗುಣಂಗಳನು ಶರೀರದಿ ಬಚ್ಚಿಟ್ಟು ಕೊಂಡು ।
ಸೂಳೆಗಾರನಿಗೆ ತುಳಸೀಮಾಲೆಯ ಶೃಂಗಾರವೇತಕೆ ।
ವಿಷಯ ಮೆಚ್ಚಿದವಗೆ ಪರರ ಕುಶಲವೇತಕೆ ।
ಪುಸಿಯಾದ ಜಪ ಮಾಡುವವಗೆ ಮುಸುಕಿನ ಡಂಭವದೇಕೆ ।
ಶುದ್ಧ ಸಾತ್ವಿಕಗೆ ಪರರ ಬುದ್ಧಿ ಯೇತಕೆ ।
ಭಂಡು ಮಾತಿನ ಕವಿಯ ಬಹು ಪಾಂಡಿತ್ಯವೇತಕೆ ।

ಎಂದು ಒಂದು ಹಾಡಿನಲ್ಲಿ ಪ್ರಶ್ನಿಸಿದ್ದಾರೆ ದಾಸರು. ಅವರು ನೆಚ್ಚಿದ್ದು ಶುದ್ಧ ಭಕ್ತಿಯನ್ನು ಮಾತ್ರ. ತೋರಿಕೆಯ ಸಾತ್ವಿಕತೆ ಅವರಿಗೆ ಸ್ವಲ್ಪವೂ ಸೇರಿಕೆಯಾಗುವುದಿಲ್ಲ. ಅಂತೆಯೇ ಇನ್ನೊಂದು ಹಾಡಿನಲ್ಲಿ "ಕೇಳನೋ ಹರಿ ತಾಳನೋ, ತಾಳಮೇಳಗಳಿದ್ದು ಪ್ರೇಮವಿಲ್ಲದ ಗಾನ, ತಂಬೂರಿ ಮೊದಲ ಅಖಿಲ ವಾದ್ಯಗಳಿದ್ದು, ಕೊಂಬು ಕೊಳಲು ಧ್ವನಿಸ್ವರಗಳಿದ್ದು, ತುಂಬುರು ನಾರದರ ಗಾನ ಕೇಳುವ ಹರಿ, ನಂಬಲಾರ ಈ ಡಂಭಕರ ಕೂಗಾಟ" ಎಂದು ಹೇಳಿದ್ದಾರೆ. ಕೊನೆಗೆ ಬೂಟಾಟಿಕೆಯ ಭಕ್ತವೃಂದಕ್ಕೆ ದಾಸರು ಹೀಗೆ ಹಿತವಚನ ಹೇಳಿದ್ದಾರೆ;

ನೆಚ್ಚನಯ್ಯ ಹರಿ ಮೆಚ್ಚನಯ್ಯ ।
ಉತ್ತಮನೆಂದೆನಿಸಿಕೊಂಡು ಅರುಣೋದಯದ ಕಾಲದಲ್ಲಿ ।
ನಿತ್ಯಕಾಗೆಯ ಹಾಗೆ ನೀರೊಳಗೆ ಮುಳುಗುವವಗೆ ।
ತೊಗಲಿನ ದೇಹಕೆ ಗೋಪಿ ಗಂಧ ತೇದು ಕೊಂಡು
ರೋಗ ಬಂದೆಮ್ಮೆಯ ಹಾಗೆ ಬರೆದು ಕೊಂಬ ಮನುಜಗೆ ।
ತಾನು ತನ್ನ ಮನೆಯ ಒಳಗೆ ದಾನ ಧರ್ಮಗಳನು ಕೊಡದೆ ।
ನೀನು ದಾನ ಮಾಡು ಎಂದು ಅನ್ಯರಿಗೆ ಹೇಳುವವಗೆ ।
ಏಕೋಭಾವ ಏಕೋಭಕ್ತಿ ಏಕೋಯುಕ್ತಿ ಏಕೋಮುಕ್ತಿ ।
ಬೇಕಾಗಿ ಪುರಂದರ ವಿಠಲನನ್ನು ಭಜಿಸುವವಗೆ ।

## ಡೊಂಕುಬಾಲದ ನಾಯಕರ ವಿಡಂಬನೆ :

ವೈಮನಸ್ಯ ಹುಟ್ಟಿಸುವ, ತಮ್ಮ ಬೇಳೆಯನ್ನು ಎಲ್ಲಿ ಬೇಯಿಸಬೇಕು ಎಂದು ಓಡಾಡುವ ಸ್ವಾರ್ಥಿ ಜನರು ದಾಸರ ಕಣ್ಣಿಗೆ ಕಂಡದ್ದು ಡೊಂಕುಬಾಲದ ನಾಯಕರಾಗಿ ।

ಡೊಂಕು ಬಾಲದ ನಾಯಕರೆ,
ನೀವೇನೂಟವ ಮಾಡಿದಿರಿ ।
ಕಣಕ ಕುಟ್ಟೋ ಅಲ್ಲಿಗೆ ಹೋಗಿ ।
ಹಣಿಕಿ ಹಣಿಕಿ ನೋಡುವಿರಿ ।
ಕಣಕ ಕುಟ್ಟೋ ಒಣಕಿಲಿ ಬಡಿದರೆ ।
ಕುಯ್ ಕುಯ್ ರಾಗವ ಮಾಡುವಿರಿ ।
ಹುಗ್ಗಿ ಮಾಡೋ ಅಲ್ಲಿಗೆ ಹೋಗಿ ।
ತಗ್ಗಿ ಬಗ್ಗಿ ನೋಡುವಿರಿ ।
ಹುಗ್ಗಿ ಮಾಡೋ ಸೌಟಲಿ ಬಡಿದರೆ ।
ಕುಯ್ ಕುಯ್ ರಾಗವ ಮಾಡುವಿರಿ ।
ಹಿರೇ ಬೀದಿಯಲಿ ಓಡುವಿರಿ ।
ಖರೇಬೂದಿಯಲಿ ಹೊರಳುವಿರಿ ।

ಅಂದು ಇಂದು ಎಂದೂ ಸಮಾಜದಲ್ಲಿ ಕಾಣಸಿಗುವ ಕಲಹಪ್ರಿಯ ಮಹನೀಯರ ವರ್ತನೆಗೆ ಕನ್ನಡಿ ಹಿಡಿದಿದೆ ಈ ಹಾಡು. ಅಂತೆಯೇ ಪೂರ್ವಾಪರವನ್ನು ವಿಚಾರ ಮಾಡದೆಯೇ, ಕಂಡಂತೆ ಹೊರಳುವ ನಾಲಿಗೆಯನ್ನು ಪುರಂದರದಾಸರು ಚೆನ್ನಾಗಿ ತರಾಟೆಗೆ ತೆಗೆದು ಕೊಂಡಿದ್ದಾರೆ.

( 33 ನೇ ಪುಟ ನೋಡಿ )

## ಹೊಸ ಊಂಜಲ್ ಸೇವೆ

ಶ್ರೀ ವೆಂಕಟೇಶ್ವರಸ್ವಾಮಿಯನ್ನು ಭಕ್ತರು ಅರ್ಚಿಸಲು ಅನುವಾಗುವಂತೆ ಪರಂಪರೆಯಿಂದ ನಡೆಯುತ್ತಿರುವ ಊಂಜಲ್ ಸೇವೆಯೊಂದಿಗೆ ಅಪೂರ್ವವಾದ ಹೊಸ ಊಂಜಲ್‌ಸೇವೆಯನ್ನು ಆರಂಭಿಸಲಾಗಿದ.

ಹೆಚ್ಚು ಮಂದಿ ಭಕ್ತರು ಸ್ವಾಮಿಯ ಆರಾಧನೆ ಮಾಡಲು ಅನುಕೂಲವಾಗುವಂತೆ ಆಲಯದ ಹೊರಗಣ ಖನಿಜ ಮಂಟಪದಲ್ಲಿ ಈ ಹೊಸಸೇವೆಯನ್ನು ಏರ್ಪಾಡು ಮಾಡಲಾಗುತ್ತದ ಈ ಸೇವೆಗಾಗಿ ರೂ 3000/– ಶುಲ್ಕ ನೀಡಬೇಕಾಗುತ್ತದೆ.

ಹೊಸ ಊಂಜಲ್‌ಸೇವೆ ಮಾಡಿಸಲು ಗೃಹಸ್ಥರು ಮುಂದೆ ಬಾರದಿದ್ದ ದಿನಗಳಲ್ಲಿ ಊಂಜಲ್‌ಸೇವೆ ಮುಕುರಮಂಟಪದಲ್ಲಿ ನಡೆಯುತ್ತದೆ. ಈ ಸೇವೆಗೆ ಭಕ್ತರು ರೂ 1500/ ಸಲ್ಲಿಸಬೇಕಾಗುತ್ತದೆ.

# ಸನಾತನ ಧರ್ಮ

ಪ್ರತಿಯೊಬ್ಬ ಮನುಷ್ಯನ ಮುಖ್ಯ ಗುರಿ ಧರ್ಮವನ್ನು ಗಳಿಸತಕ್ಕದ್ದು. ಮನುಷ್ಯನಿಗೆ ಧರ್ಮ ಅರ್ಥ ಕಾಮ ಮೋಕ್ಷಗಳು ಎಂಬ ಪುರುಷಾರ್ಥಗಳು ಬೇಕೇ ಬೇಕು. ಮಾನವನ ಆಶೆಗಳಿಗೆ ಆಕಾಂಕ್ಷೆಗಳಿಗೆ ಮಿತಿ ಇಲ್ಲ. ಅವುಗಳನ್ನು ಮಿತಿಯಲ್ಲಿ ಹಿಡಿದು ತನ್ನ ಸುಖದ ಹಾದಿಗೆ ಇಹಪರ ಸುಖಗಳಿಗೆ ಸೋಪಾನ ಕಟ್ಟಲು ಧರ್ಮದ ಅಡಿಗಲ್ಲನ್ನು ಹಾಸುತ್ತಾನೆ. ಧರ್ಮಕ್ಕಿಂತ ಶ್ರೇಷ್ಠವಾದ ಸಂಪತ್ತು ಮತ್ತೊಂದಿಲ್ಲ. ಅಂತಹವುಗಳಲ್ಲಿ ಸನಾತನ ಧರ್ಮ ಶಾಶ್ವತ ಧರ್ಮ. ಅದೇ ಪ್ರಾಚೀನ ಧರ್ಮ. ಇದಕ್ಕೆ ತಳಹದಿ ವೇದಗಳು. ಪವಿತ್ರತಮವಾದ ಈ ವೇದಗಳು ಅನಾದಿಕಾಲದಿಂದ ಭಗವಂತನಿಂದ ಮಾನವನಿಗೆ ದಯಪಾಲಿಸಲ್ಪಟ್ಟ ಜ್ಞಾನ ಸಿಂಧುಗಳು. ಈ ಸನಾತನ ಧರ್ಮವನ್ನು ಆರ್ಯ ಧರ್ಮವೆಂದೂ ಕರೆಯುವುದುಂಟು. ಆರ್ಯ ಶಬ್ದಕ್ಕೆ ಶ್ರೇಷ್ಠವೆಂದರ್ಥ. ಪೃಥಿವಿಯಲ್ಲಿ ಬಹು ಪೂರ್ವದಲ್ಲಿ ಬಾಳಿದ ಮಾನವ ಕುಲಗಳಿಂತ ಗುಣದಲ್ಲಿಯೂ, ರೂಪಿನಲ್ಲಿಯೂ, ಬಹು ಶ್ರೇಷ್ಠವಾಗಿದ್ದ ಅದೊಂದು ಮಹಾ ಪಂಗಡಕ್ಕೆ, ಕುಲಕ್ಕೆ ಆರ್ಯವೆಂಬ ಹೆಸರಾಯಿತು. ಆ ಆರ್ಯರಿಂದ ಮೂಡಿರುವ ತತ್ತ್ವ ವಿಚಾರವೇ ಹಿಂದೂ ಧರ್ಮ. ಈ ಹಿಂದೂ ಧರ್ಮವೇ ಸನಾತನ ಧರ್ಮ. "ಧರ್ಮಾರ್ದರ್ಥಂ ಚ ಕಾಮಂಚ" ಎನ್ನುವ ತತ್ತ್ವವೇ ಸನಾತನ ಧರ್ಮದ ಮೂಲ ವಿಚಾರ. ಧರ್ಮದಿಂದ ಸಾಧಿಸಿದ ಅರ್ಥವೇ ಅರ್ಥ. ಧರ್ಮದಿಂದ ಸಾಧಿಸಿದ ಕಾಮವೇ ಕಾಮ. ಅಧರ್ಮದಿಂದ ಗಳಿಸಿದ ಧನ ಸುಖ ಶ್ರೇಯಸ್ಸನ್ನು ತರಲಾರದು. ಇಹಪರಗಳಿಗೂ ಅಂತಹ ಅಧರ್ಮ ಅನರ್ಥಕಾರಿ. ಸನಾತನ ಧರ್ಮವನ್ನು ಪ್ರಚಾರ ಮಾಡಲು ನಮ್ಮಲ್ಲಿ ಮಹಾಪುರುಷರು, ಸಂತರು, ಜ್ಞಾನಿಗಳು ಧರ್ಮ ಗುರುಗಳು, ಕವಿಗಳು, ವೀರರು ತಮ್ಮ ತನು ಮನ ಧನಗಳನ್ನು ಅರ್ಪಿಸಿದ್ದಾರೆ.

ಈ ಸನಾತನ ಧರ್ಮಕ್ಕೆ ಋಗ್ಯಜುಸ್ಸಾಮ ಅಥರ್ವಣಗಳೆಂಬ ನಾಲ್ಕು ಶ್ರುತಿಗಳು, (ಇವೇ ನಾಲ್ಕು ವೇದಗಳು) ಸ್ಮೃತಿಗಳೂ, ಶ್ರೀಮದ್ರಾಮಾಯಣ, ಶ್ರೀಮನ್ಮಹಾಭಾರತ ಎಂಬ ಇತಿಹಾಸಗಳೂ ವಿಷ್ಣು ಪುರಾಣ, ಭಾಗವತ ಮೊದಲಾದ ೧೮ ಪುರಾಣಗಳೂ ತಳಹದಿ. ಸ್ಮೃತಿಗೆ ಅಂದರೆ ಧರ್ಮ ಶಾಸ್ತ್ರಗಳಿಗೆ ಶ್ರುತಿಯೇ ಅಂದರೆ ವೇದಗಳೇ ಆಧಾರ, ಅನುಷ್ಠಾನಗಳಿಗೂ, ಗೃಹಕೃತ್ಯ ಕರ್ಮಗಳಿಗೂ, ಸಮಾಜಿಕ ವ್ಯವಹಾರಗಳಿಗೂ, ರಾಷ್ಟ್ರೀಯ ಧರ್ಮಗಳಿಗೂ ಸಂಬಂಧಪಡುವ ವಿಧಿಗಳನ್ನು ನಿಬಂಧನೆಗಳನ್ನು ಧರ್ಮ ಶಾಸ್ತ್ರಗಳು ಹೇಳುತ್ತವೆ. ಹಿಂದೂ ಧರ್ಮಕ್ಕೆ ಮನು ಧರ್ಮ ಶಾಸ್ತ್ರವೇ ಪ್ರಥಮ ಧರ್ಮ ಶಾಸ್ತ್ರ. ಅದೇ ಪ್ರಮಾಣ. ಮನುವು ಸ್ವಲ್ಪ ಹೇಳಿದ್ದರೂ ಅದೆಲ್ಲಾ ಸಿದ್ಧೌಷಧ. ಈ ಶಾಸ್ತ್ರವು ೧೨ ಅಧ್ಯಾಯಗಳುಳ್ಳದ್ದಾಗಿ ಸುಮಾರು ಮೂರು ಸಾವಿರ ಶ್ಲೋಕಗಳ ನೀತಿಗ್ರಂಥ. ಈ ಮನು ಧರ್ಮ, ಶಾಸ್ತ್ರದಲ್ಲಿ ಸೃಷ್ಟಿ ವಿಚಾರ. ಧರ್ಮಾಧರ್ಮ ವಿಚಾರ, ಚಾತುರ್ವರ್ಣಧರ್ಮ, ಚತುರಾಶ್ರಮ ಧರ್ಮ, ಆಚಾರ ಪ್ರಶಂಸೆ, ಆಚಾರ ಫಲ. ದುರಾಚಾರನಿಂದಾ, ರಾಜಧರ್ಮ, ವ್ಯವಹಾರ ಧರ್ಮ, ಭಗವದ್ಭಕ್ತಿ ಧರ್ಮ – ತತ್ಫಲ. ಧರ್ಮ ನಿಷ್ಠೆ, ಸತ್ಯಸಂಧತೆ, ಸದ್ವರ್ತನ ಮುಂತಾದ ಆತ್ಮಜೀವನಕ್ಕೆ ಹೇತುವಾದ ಅನೇಕ ಧರ್ಮಗಳ ಪರಿಶೀಲನೆ, ಮುಂತಾದ ಚತುರ್ವಿಧ ಪುರುಷಾರ್ಥ ಸಾಧನೆಗಳು ವಿಸ್ತಾರವಾಗಿ ಪ್ರತಿಪಾದಿತವಾಗಿದೆ.

ಶ್ರೀಮದ್ಭಗವದ್ಗಿತೆಯಲ್ಲಿ ಮನುಧರ್ಮ ಶಾಸ್ತ್ರದ ಬಗ್ಗೆ ಸ್ವಾಮಿ ಶ್ರೀಕೃಷ್ಣಪರಮಾತ್ಮನು:

ಇಮಂ ವಿವಸ್ವತೇ ಯೋಗಂ
ಪ್ರೋಕ್ತವಾನಹಮವ್ಯಯಮ್ ।
ವಿವಸ್ವಾನ್ಮನವೇ ಪ್ರಾಹ
ಮನುರಿಕ್ಷ್ವಾಕವೇಽಬ್ರವೀತ್ ॥

ಎಂಬುದಾಗಿ ಹೇಳಿರುತ್ತಾನೆ. ಮುಮುಕ್ಷುವಿಗೆ ಅತ್ಯಾವಶ್ಯಕವಾಗಿ ತಿಳಿದು ಆಚರಿಸತಕ್ಕಂತಹ ಎಲ್ಲಾ ಧರ್ಮಗಳನ್ನು ಸ್ವಾಮಿ ಸ್ಫುಟವಾಗಿ, ಸುಲಭವಾಗಿ, ಶ್ಲೋಕಗಳ ಮುಖಾಂತರ ಅನೇಕ ಗೂಢಾರ್ಥಗಳನ್ನು



**ಶ್ರೀ ಕಂದಾಡೈ ಕೇಶವನ್**

ಪ್ರತಿಪಾದಿಸುವ ಪದಗಳಿಂದ ಗೀತೆಯಲ್ಲಿ ಸನಾತನ ಧರ್ಮವನ್ನು ಸಾರಿದ್ದಾನೆ. ಶ್ರೀ ಕೃಷ್ಣನು ತಾನೆ ಹೇಳುವಂತೆ ಧರ್ಮಕ್ಕೆ ತುಂಬಾ ಹಾನಿಯುಂಟಾಗಿ ಅಧರ್ಮ ಹೆಚ್ಚಾದಾಗ ಸನಾತನ ಧರ್ಮವನ್ನು ರಕ್ಷಿಸಲು ಅವತಾರ ಮಾಡುತ್ತಾನೆ

ಯದಾ ಯದಾಹಿ ಧರ್ಮಸ್ಯ
ಗ್ಲಾನಿರ್ಭವತಿ ಭಾರತ |
ಅಭ್ಯುತ್ಥಾನಮಧರ್ಮಸ್ಯ
ತದಾತ್ಮಾನಂ ಸೃಜಾಮ್ಯಹಮ್ ||

ಪರಿತ್ರಾಣಾಯ ಸಾಧೂನಾಂ
ವಿನಾಶಾಯ ಚ ದುಷ್ಕೃತಾಮ್ |
ಧರ್ಮ ಸಂಸ್ಥಾಪನಾರ್ಥಾಯ
ಸಂಭವಾಮಿ ಯುಗೇ ಯುಗೇ ||

ಶಾಸ್ತ್ರಗಳಲ್ಲಿ ಹೇಳಿರುವುದನ್ನು ಅನುಷ್ಠಾನ ಮಾಡದೆ ಯಾವನು ತನ್ನ ಇಚ್ಛಾನುಸಾರ ಪ್ರವರ್ತಿಸುತ್ತಾನೊ ಅವನು ಯಾವ ವಿಧವಾದ ಆಮುಷ್ಮಿಕ ಸಿದ್ಧಿಗಳನ್ನು ಪಡೆಯಲಾರ. ಅಲ್ಲದೆ ಅಂತಹವನಿಗೆ ಐಹಿಕ ಸುಖವೂ ಪ್ರಾಪ್ತವಾಗುವುದಿಲ್ಲ.

ಯಃ ಶಾಸ್ತ್ರ ವಿಧಿಮುತ್ಸೃಜ್ಯ
ವರ್ತತೇ ಕಾಮ ಕಾರತಃ |
ನ ಸ ಸಿದ್ಧಿಮವಾಪ್ನೋತಿ ನ
ಸುಖಂ ನ ಪರಾಂ ಗತಿಮ್ ||

ಆದ್ದರಿಂದ ನಾವು ಮಾಡತಕ್ಕಂತಹ ಮಾಡದೇ ಬಿಡತಕ್ಕಂತಹ ಕಾರ್ಯಾಕಾರ್ಯ ವ್ಯವಸ್ಥೆಯಲ್ಲಿ ಶಾಸ್ತ್ರವನ್ನೇ ಅನುಸರಿಸಬೇಕು.

" ತಸ್ಮಾತ್ ಶಾಸ್ತ್ರಂ ಪ್ರಮಾಣಂತೇ
ಕಾರ್ಯಾಕಾರ್ಯವ್ಯವಸ್ಥಿತೌ "

ಆದ್ದರಿಂದ ಶ್ರೇಯಸ್ಸು ಸಾಧನೆಗೆ ಶಾಸ್ತ್ರವಚನ ಪ್ರಮಾಣ. ಆಸುರೀ ಪ್ರಕೃತಿಗಳು ಶಾಸ್ತ್ರ ವಿಧಿಯನ್ನು ಬಿಟ್ಟು ದಂಬಕ್ಕಾಗಿ ಸ್ವೇಚ್ಛಾನುಸಾರ ಕರ್ಮ ಮಾಡುತ್ತಾರೆ ಆದರಿಂದ ಅವರ ಆತ್ಮ ನಾಶನವೇ ವಿನಹ ಉಜ್ಜೀವನವಿಲ್ಲ. ಧರ್ಮಕ್ಕೆ ಶ್ರುತಿ ಸ್ಮೃತಿ ಆಧಾರ ಇರುವೆಗಳು ಸ್ವಲ್ಪ ಸ್ವಲ್ಪ ಮಣ್ಣನ್ನು ತೆಗೆದುಕೊಂಡು ಹೋಗಿ ದೊಡ್ಡ ದೊಡ್ಡ ಹುತ್ತಗಳನ್ನು ರಚಿಸುವಂತೆ ಯಾವ ಪ್ರಾಣಿಗೂ ಯಾವ ವಿಧವಾದ ಹಾನಿ ತೊಂದರೆ ಉಪಹತಿ ಆಗದ ಹಾಗೆ ಪರಲೋಕ ಪ್ರಾಪ್ತಿ ಸಹಾಯಾರ್ಥ ಮೆಲ್ಲ ಮೆಲ್ಲನೆ ಧರ್ಮಾಚರಣೆಯನ್ನು ಮಾಡಬೇಕು.

ಹುಟ್ಟಿನಾಗ ಪ್ರಾಣಿಯು ಒಬ್ಬನೇ ಹುಟ್ಟುತ್ತಾನೆ. ಒಬ್ಬನೇ ಸಾಯುತ್ತಾನೆ ತನ್ನೊಡನೆ ತಂದೆ ತಾಯಿ ಹೆಂಡತಿ ಮಗ ಯಾರೂ ಬರಲಾರರು. ತನ್ನ ಪಾಪ ಪುಣ್ಯಗಳನ್ನು ಮಾತ್ರ ಆತ ಒಯ್ಯುತ್ತಾನೆ ಅದ್ದರಿಂದ ಯಾವ ಕಾಲಕ್ಕೂ ಧರ್ಮ ತ್ಯಾಗ ಮಾಡಬಾರದು.

ಮೃತಂ ಶರೀರಮುತ್ಸೃಜ್ಯ
ಕಾಷ್ಠ ಲೋಷ್ಠ ಸಮಂ ಕ್ಷಿತೌ |
ವಿಮುಖಾ ಬಾಂಧವಾ ಯಾಂತಿ
ಧರ್ಮಸ್ತಮನು ಗಚ್ಛತಿ ||

ಧರ್ಮವನ್ನು ನಿರಂತರ ಆಚರಿಸಬೇಕು. ಇದೇ ಇಹಪರಗಳಲ್ಲಿ ನಮಗೆ ಭರವಸೆಯ ಅವಲಂಬನೆ, ಹಿತವಾದ ಭಾವನೆ ಕೊಡಬಲ್ಲದು. ಸನಾತನ ಧರ್ಮ ಪಾಲನೆ ಆದಲ್ಲಿ ವ್ಯಕ್ತಿ ಪಾಲನೆಯೂ ಆಗುವುದು 'ಧರ್ಮ ಏವಹ ಕೋಹಂತಿ ಧರ್ಮೋ ರಕ್ಷತಿ ರಕ್ಷಿತಃ' (ನಿತ್ಯಶಃ) ಎಂದು ಹೇಳುತ್ತಾರೆ. ಧರ್ಮವನ್ನು ಅತಿಕ್ರಮಿಸಿದರೆ ಧರ್ಮ ನಷ್ಟವಾಗುತ್ತೆ. ಸರ್ವನಾಶ ಶತಃಸಿದ್ಧ. ಧರ್ಮ ರಕ್ಷಣೆಯನ್ನು ಮಾಡಿದರೆ ಅದು ನಮ್ಮನ್ನು ನಿತ್ಯವೂ ರಕ್ಷಿಸುತ್ತದೆ.

ಸರ್ವರನ್ನು ತನ್ನ ವಶದಲ್ಲಿಟ್ಟುಕೊಂಡಿರುವ ಪರಮಾತ್ಮ ಸದಾ ಸರ್ವ ಪ್ರಾಣಿಗಳ ಹೃದಯಗಳಲ್ಲಿ ಅಂತರಾತ್ಮನಾಗಿ ನೆಲೆಸಿದ್ದಾನೆ. ಅದುದರಿಂದ ಅತನನ್ನು ವಂಚಿಸಲು

ಸಾಧ್ಯವಿಲ್ಲ. ಆತ ನಿರಂತರವೂ ಆತ್ಮ ಸಾಕ್ಷಿಯಾಗಿ, ಎಲ್ಲಾ ಸಂಕಲ್ಪಗಳನ್ನೂ, ಭಾವನೆಗಳನ್ನೂ, ಕೃತ್ಯಗಳನ್ನೂ ನೋಡುವ ಸಾಕ್ಷಿಯಾಗಿರುತ್ತಾನೆ ಮನಸ್ಸಿನಲ್ಲೊಂದು ಯೋಚನೆಯಲ್ಲೊಂದು, ಬಾಯಲ್ಲಿ ಒಂದು, ಕಾರ್ಯದಲ್ಲಿ ಒಂದು ಮಾಡಬಾರದು. ಮನುವು ಈ ತತ್ತ್ವವನ್ನೇ ಹೇಳುತ್ತಾ ಮನೋವಾಕ್ಕಾಯಗಳಲ್ಲಿ ಒಂದೇ ರೀತಿಯಾಗಿ ಋಜು ಮಾರ್ಗದಿಂದ ನಡೆದುಕೊಳ್ಳುತ್ತಿದ್ದರೆ ನಮ್ಮ ಪಾಪಕ್ಷಯಕ್ಕಾಗಿ ಗಂಗಾದಿ ಸ್ನಾನಕ್ಕಾಗಲೀ, ಕುರುಕ್ಷೇತ್ರಾದಿ ಪುಣ್ಯ ಕ್ಷೇತ್ರಗಳ ದರ್ಶನಕ್ಕಾಗಲೀ ನಾವು ಹೋಗಬೇಕಾಗಿಲ್ಲ ಎಂದು ಹೇಳಿದ್ದಾನೆ.

ಧರ್ಮ ಲಕ್ಷಣಗಳನ್ನು ಹೇಳುತ್ತಾ ಮನುವು

ಧೃತಿ ಕ್ಷಮಾ ದಮೋಽಸ್ತೇಯಂ
ಶೌಚಂ ಇಂದ್ರಿಯ ನಿಗ್ರಹಃ ।
ಧೀರ್ವಿದ್ಯಾ ಸತ್ಯಮಕ್ರೋಧೋ
ದಶಕಂ ಧರ್ಮ ಲಕ್ಷಣಮ್ ॥

ಧೈರ್ಯ, ಕ್ಷಮಾ, ಮನೋ ನಿಗ್ರಹ, ಅನ್ಯಾಯದಿಂದ ಪರರ ಧನವನ್ನು ಅಪಹರಿಸದಿರುವುದು, ಶೌಚ, ಶುದ್ಧಿ, ಇಂದ್ರಿಯ ನಿಗ್ರಹವೂ, ಶಾಸ್ತ್ರಾದಿ ತತ್ತ್ವಜ್ಞಾನವೂ, ಆತ್ಮಜ್ಞಾನವೆಂಬ ವಿದ್ಯೆ, ಯಥಾರ್ಥ ಕಥನ, ಎಂಬ ಹತ್ತು ಧರ್ಮದ ಲಕ್ಷಣಗಳು.

ಅದನ್ನೇ ಗೀತೆಯಲ್ಲಿ ಶ್ರೀಕೃಷ್ಣನು ದೈವೀ ಸಂಪತ್ತಿನಲ್ಲಿ ಹುಟ್ಟಿರುವ ಗುಣಗಳು ಎಂಬುದಾಗಿ ಹೇಳುತ್ತಾ

ಅಭಯಂ ಸತ್ತ್ವ ಸಂಶುದ್ಧಿ
ಜ್ಞಾನ ಯೋಗ ವ್ಯವಸ್ಥಿತಿಃ ।
ದಾನಂ ದಮಶ್ಚ ಯಜ್ಞಶ್ಚ
ಸ್ವಾಧ್ಯಾಯ ಸ್ತಪ ಆರ್ಜವಮ್ ॥

ಎಂಬುವ ಶ್ಲೋಕಗಳಲ್ಲಿ ಹಾಗೂ ಮುಂದಿನ ಶ್ಲೋಕಗಳಲ್ಲಿ ಇಪ್ಪತ್ತಾರು ದೈವೀ ಗುಣಗಳನ್ನು ವಿವರಿದ್ದಾನೆ. ಧರ್ಮ ಎನ್ನುವ ಪದ ಧೃ ಎಂಬ ಸಂಸ್ಕೃತ ಪದದಿಂದ ಹುಟ್ಟಿದೆ. ಧೃ ಎಂದರೆ ಎತ್ತಿ ಹಿಡಿಯುವುದು ಎಂಬರ್ಥ-

ಮಾನವನನ್ನು ಎತ್ತಿ ಹಿಡಿಯುವಂತಹ ಒಂದು ತತ್ತ್ವ. ಅದೇ ಸತ್ಯ. ಅದೇ ಋತು. ಅದೇ ನಿತ್ಯ ಅದೇ ಪುರಾತನ ಧರ್ಮ. ಭಗವಂತನಲ್ಲಿ ದೃಢ ನಂಬಿಕೆ. ಭಗವಂತನ ಸೃಷ್ಟಿಯೆಲ್ಲವನ್ನೂ ಪ್ರೀತಿಸುವುದು ಭಗವಂತನ ಚೈತನ್ಯವನ್ನು ಶಕ್ತಿಯನ್ನು ನಂಬಿ ಋಜು ಮಾರ್ಗದಲ್ಲಿ ನಡೆಯುವುದೇ ಧರ್ಮ.

"ನಿಯತಂ ಕುರು ಕರ್ಮತ್ವಂ"

"ಕಾರ್ಯಂ ಕರ್ಮ ಸಮಾಚರ'

"ಸ್ವಕರ್ಮಣಾ ತಮಭ್ಯರ್ಚ್ಯ
ಸಿದ್ಧಿಂ ವಿಂದತಿ ಮಾನವಃ ।"
"ಸ್ವೇ ಸ್ವೇ ಕರ್ಮಣ್ಯಭಿರತಃ
ಸಂಸಿದ್ಧಿಂ ಲಭತೇ ನರಃ ॥"

"ಶ್ರೇಯಾನ್ ಸ್ವಧರ್ಮೋ ವಿಗುಣಃ"



—ಮುಂತಾದ ಅಮೋಘವಾದ ಅಮೃತಮಯ ವಾಕ್ಯಗಳಿಂದ ಶ್ರೀಕೃಷ್ಣ ಪರಮಾತ್ಮನು ಗೀತೆಯಲ್ಲಿ ಹೇಳಿದ್ದಾನೆ.

ಸ್ಮೃತಿಗಳಲ್ಲಿ ಬೋಧಿಸಿದ ಸನಾತನ ಧರ್ಮವು ವರ್ಣಾಶ್ರಮ ಧರ್ಮಕ್ಕೂ ಅನ್ವಯಿಸುತ್ತೆ. ಶಾಸ್ತ್ರಗಳಲ್ಲಿ ನಿಯತವಾದ ಕರ್ಮಗಳನ್ನು ಅವಶ್ಯಕವಾಗಿ ಮಾಡುತ್ತಿರಬೇಕೆಂದು ಬೋಧನೆ. ಎಲ್ಲಾ ಧರ್ಮಗಳಲ್ಲಿ ತತ್ತ್ವ ಪುರಾಣ, ತತ್ತ್ವ ಜ್ಞಾನ, ತತ್ತ್ವ ನಿಷ್ಠೆ ಹಾಗೂ ಆಚಾರಗಳಿಗೆ ಪ್ರಾಧಾನ್ಯತೆ ಕೊಡಲಾಗಿದೆ ವೇದಗಳೇ ಈ ಧರ್ಮಗಳಿಗೆ ಮೂಲ. ವೇದ ಎಂದರೆ ವಿದ್ ಎಂದರೆ ತಿಳಿ ಎಂಬ ಧಾತುವಿನಿಂದ ಹುಟ್ಟಿದೆ. ಪುರಾತನ ಕಾಲದಿಂದ ಬಂದ ಋಷಿಗಳು ನಮಗೆ ನೀಡಿದ ಜ್ಞಾನ ಭಂಡಾರ ವೇದ ವೇದದಿಂದ ಹೊರಟ ಉಪನಿಷತ್ತು ತತ್ತ್ವವೆಂದಾತವಾಯಿತು. ಕಾರಣ ಋಷಿಗಳ ಹತ್ತಿರ ಕುಳಿತು ಕೇಳಿದ ಶಿಷ್ಯರು ಗಹನವಾದ ವೇದಾಂತ ರಹಸ್ಯ ಸೂತ್ರಗಳನ್ನು ಕ್ರೋಢೀಕರಿಸಿದರು. ಇಲ್ಲಿ ಜೀವ ಜಗತ್ತು ಹಾಗೂ ಪರಮಾತ್ಮನ ವಿಷಯಗಳ ಬಗ್ಗೆ ವಿಪುಲವಾದ ತತ್ತ್ವ ಚಿಂತನೆ ನಡೆದಿದೆ. ಸಾವಿರಾರು ವರ್ಷಗಳಿಂದ ಸನಾತನ ಧರ್ಮ ಮಾನವನಿಗೆ ನಿತ್ಯ ತೃಪ್ತಿ ಶಾಂತಿಯಯನ್ನು ಕೊಟ್ಟಿದೆ-

ಶ್ರೀರಾಮಾಯಣದಲ್ಲಿ ಶ್ರೀ ರಾಮಚಂದ್ರನು ರಾಜ್ಯಭಾರ ಮಾಡುತ್ತಿರುವಾಗ

ಆಸನ್ ಪ್ರಜಾ ಧರ್ಮ ರತಾ
ರಾಮೇ ಶಾಸತಿ ನಾನೃತಾಃ ।
ಸರ್ವೇ ಲಕ್ಷಣ ಸಂಪನ್ನಾ
ಸರ್ವೇ ಧರ್ಮ ಪರಾಯಣಾಃ ॥

ಎಂದು ಹೇಳಿರುತ್ತೆ. ಆ ರಾಮರಾಜ್ಯಕ್ಕೆ ಧರ್ಮ ರಾಜ್ಯ ಎಂಬ ಹೆಸರೂ ಬಂತು. ಸುಖ ಸಂಪತ್ತುಗಳಿಂದ ಆಗ ರಾಮರಾಜ್ಯ ವಿರಾಜಿಸುತ್ತಿತ್ತು; ಕಾರಣ ಎಲ್ಲರೂ ಸ್ವಧರ್ಮ ನಿಷ್ಠರಾಗಿದ್ದರಿಂದ ಮಾತ್ರ. ಮಹಾಭಾರತವಂತೂ ಧರ್ಮಕ್ಕಾಗಿ ಎದ್ದು ನಿಂತ ಇತಿಹಾಸ. ಭಾರತ ಯುದ್ಧವೂ ಕೂಡ ಧರ್ಮಕ್ಕಾಗಿ ನಡೆದ ಮಹಾಯುದ್ಧ. ಇಲ್ಲಿ ಸನಾತನ ಧರ್ಮವನ್ನು ಎಲ್ಲಾ ಪ್ರಕಾರವಾಗಿ ವ್ಯಾಸರು ಚಿತ್ರಿಸಿದ್ದಾರೆ. 'ಸರ್ವಭೂತ ಹಿತೇ ರತಃ' ಎಂಬುವ ತತ್ತ್ವ ಭಾರತದಲ್ಲಿ ಎಲ್ಲೆಲ್ಲೂ ಎದ್ದು ಕಾಣುತ್ತೆ,

ಅಹಿಂಸಾ ಪರಮೋಧರ್ಮಃ
ಸ ಚ ಸತ್ಯೇ ಪ್ರತಿಷ್ಠಿತಃ ।

ಎಂಬುವ ಅಹಿಂಸಾತತ್ತ್ವವನ್ನು ಲೋಕಕ್ಕೆ ನೀಡಿದ ಕೀರ್ತಿ ವ್ಯಾಸರಿಗೆ ಸಲ್ಲಬೇಕು. ಜೀವಿಗಳಿಗೆ ಯಾವುದು ಹಿತವೋ ಅದು ಸತ್ಯ ಎಂಬುವ ರಹಸ್ಯಸೂತ್ರವನ್ನು ಕೂಡ ಈ ಮಂತ್ರ ದ್ರಷ್ಟಾರ ನೀಡಿದ.

"ಸತ್ಯಂ ಧರ್ಮಸ್ಸನಾತನಃ"
ಯದ್ಭೂತ ಹಿತಮತ್ಯಂತಂ
ತತ್ಸತ್ಯ ಮಿತಿಧಾರಣಾ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ-ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ | |
|---|---|---|---|---|
| ಸುಪ್ರಭಾತ | ಪ್ರಾ 5–00 | ಪ್ರಾ 5–30 | ಪ್ರಾ 5–00 | ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 | ಪ್ರಾ 6–00 | ಪ್ರಾ 5–30 | ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 | ಪ್ರಾ 6–30 | ಪ್ರಾ 6–00 | ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 | ಪ್ರಾ 7–00 | ಪ್ರಾ 6–30 | ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 | ಪ್ರಾ 7–30 | ಪ್ರಾ 7–00 | ಪ್ರಾ 7–30 |
| ಸರ್ವದರ್ಶನ | ಪ್ರಾ 7–30 | ಪ್ರಾ 10–00 | *ಅಭಿಷೇಕ ಪ್ರಾ 7–30 | ಪ್ರಾ 8–30 |
| | | | ಸಮರ್ಪಣ ಪ್ರಾ 8–30 | ಪ್ರಾ 9–30 |
| 2ನೇ ಅರ್ಚನೆ | | | | |
| 2ನೇ ಗಂಟೆ | ಪ್ರಾ 10–00 | ಪ್ರಾ 10–30 | ಪ್ರಾ 9–30 | ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | | | ಪ್ರಾ 10–30 | ಮ 12–00 |
| ಸರ್ವದರ್ಶನ | ಪ್ರಾ 10–30 | ಸಂ 6–30 | ಪ್ರಾ 10–30 | ಸಂ 6–30 |
| ರಾತ್ರಿ ಕೈಂಕರ್ಯ | | | | |
| ರಾತ್ರಿ ಗಂಟೆ | ಸಂ 6–30 | ರಾ 7–00 | ಸಂ 6–30 | ರಾ 7–00 |
| ಸರ್ವದರ್ಶನ | ರಾ 7–00 | ರಾ 8–45 | ರಾ 7–00 | ರಾ 8–45 |
| ಏಕಾಂತ ಸೇವೆ | ರಾ 8–45 | ರಾ 9–00 | ರಾ 8–45 | ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ಸತ್ಯವು ಸಜ್ಜನರಿಗೆ ಸದಾ ಧರ್ಮವಾಗಿರುತ್ತೆ. ಸತ್ಯವೇ ಸನಾತನ ಧರ್ಮ. ಸತ್ಯವನ್ನು ಹೇಳುವಾಗ, ಹೇಳಿದಂತೆ ನಡೆದಾಗ ಸೇವಾ ಮನೋಭಾವದಿಂದ ಸ್ವಾರ್ಥರಹಿತನಾಗಿ ನಿಸ್ವಾರ್ಥಬುದ್ಧಿಯಿಂದ ಪರಹಿತವನ್ನು ಕೋರುವ ಮಾನವ ಬಹು ಶ್ರೇಷ್ಠ ತ್ಯಾಗ ಬುದ್ಧಿಯಿಂದ ಮಾನವ ಸೇವೆಯನ್ನು ಮಾಡುವ ಮನೋಧರ್ಮ ಬಂದರೆ ವೈರಾಗ್ಯ ತಾನೇ ತಾನಾಗಿ ಬರುತ್ತೆ. "ತ್ಯಾಗೇನ ಏಕೇನ ಅಮೃತತ್ವಮಶ್ನುತೇ" ಎಂಬಂತೆ ಅಂತಹ ಮಾನವ ದೈವವನ್ನು ಹೊಂದುತ್ತಾನೆ. ಶಾಂತಿ ಸುಖವನ್ನು ಅನುಭವಿಸುತ್ತಾನೆ. "ಸುಖಾನಾಂ ತುಷ್ಟಿರುತ್ತಮಾ" ಸುಖಗಳಲ್ಲಿ ತೃಪ್ತಿಯೇ ಪರಮ ಸುಖವಲ್ಲವೆ! ಮನುಷ್ಯನನ್ನು ಅಧಃಪತಕ್ಕೆ ಒಯ್ಯುವ ಕೋಪತಾಪಗಳನ್ನು ವಿಸರ್ಜಿಸಿ ಶಮದಮಗಳಲ್ಲಿ ನಿರತನಾದವನು ಸುಖವನ್ನು ಪಡೆಯುತ್ತಾನೆ. ದಧೀಚಿಯಂತೆ ಸ್ವಾರ್ಥ ತ್ಯಾಗವನ್ನು ತಳೆಯಬೇಕು. ಎಲ್ಲಾ ಶಾಸ್ತ್ರಗಳ, ಎಲ್ಲಾ ಧರ್ಮಗಳ ಉದ್ದೇಶ ಮನುಷ್ಯನನ್ನು ಒಳ್ಳೆಯ ಜೀವಿಯನ್ನಾಗಿ ಮಾಡುವುದು. ಜೀವಿಗಳು ಪುನಃ ಪುನಃ ಸಂಸಾರ ಚಕ್ರಕ್ಕೆ ಸಿಕ್ಕಿ ಬೇರೆ ಬೇರೆ ದೇಹಧಾರಣೆ ಮಾಡುವುದು, ಅವರು ಪ್ರತಿಯೊಂದು ಜನ್ಮದಲ್ಲಿಯೂ ಸಂಪಾದಿಸಿದ ಪಾಪಪುಣ್ಯಗಳ ಫಲಿತದಿಂದ. ಈ ಕರ್ಮ ನಿಯಮವನ್ನು ಯಾರೂ ಮೀರಲಾರರು. ಆದ್ದರಿಂದ ಸನಾತನ ಧರ್ಮ ಪರಿಪಾಲನೆ ಮಾಡಿ ನಮ್ಮ ಜೀವನಗಳನ್ನು ಸುಗಮಮಾಡಿಕೊಳ್ಳೋಣ. ಶುದ್ಧ ಸಂಸ್ಕಾರವಂತರಾಗೋಣ. ಸನಾತನ ಧರ್ಮ ಸಾರಥಿಗಳಾಗೋಣ. ಸನಾತನ ಧರ್ಮ ತತ್ತ್ವ ಯಾವ ಕಡೆಯಿಂದ ಬರಲಿ ಸ್ವೀಕರಿಸೋಣ.



# ಶ್ರೀ ಕೃಷ್ಣ ಭಕ್ತಿ

**ಶ್ರೀ ಕೆ. ರಮಾನಂದ** ಎಂ.ಎ.

(ಹಿಂದಿನ ಸಂಚಿಕೆ ತರುವಾಯ)

ಕೃಷ್ಣಭಕ್ತಿಯ ಪ್ರತಿಪಾದಕರಲ್ಲಿ ವಲ್ಲಭಾಚಾರ್ಯರ ಸ್ಥಾನವು ಪ್ರಮುಖವಾದುದಾಗಿದೆ ವಲ್ಲಭಾಚಾರ್ಯರು ಎಲ್ಲಾ ಧರ್ಮಗಳ ತತ್ತ್ವಗಳನ್ನೂ, ಪರಬ್ರಹ್ಮನಲ್ಲೇ ಅಳವಡಿಸಿದವರಾಗಿದ್ದರು ವಲ್ಲಭಾಚಾರ್ಯರ ಪ್ರಕಾರ ಶ್ರೀಕೃಷ್ಣನೇ ಪರಬ್ರಹ್ಮ, ಕೃಷ್ಣನೇ ಪುರುಷೋತ್ತಮ ಈ ಸೃಷ್ಟಿಯ ನಿರ್ಮಾಣವೆಲ್ಲವೂ ಆ ಪರಬ್ರಹ್ಮನಾದ ಕೃಷ್ಣನದೇ ಎಂದು ನಂಬಿ ಕೃಷ್ಣನ ಲೀಲೆಗಳನ್ನು ರಂಜಕವಾಗುವಂತೆ ವರ್ಣಿಸಿದರು ಅಲ್ಲದೆ 'ಪುಷ್ಟಿಮಾರ್ಗ' ವೆಂಬ ಸಂಪ್ರದಾಯವನ್ನು ಸ್ಥಾಪಿಸಿದ ಕೀರ್ತಿಯೂ ವಲ್ಲಭಾಚಾರ್ಯರದೇ ಆಗುತ್ತದೆ. ಭಗವಂತನ ಅನುಗ್ರಹ ಉಂಟಾದಾಗ ಜೀವವೊಂದು ಅವನ ಲೀಲಾಗಾನವನ್ನು ಮಾಡಲು ಆರಂಭಿಸುತ್ತದೆ. ಭಗವಂತನ ಅನುಗ್ರಹ ಇಲ್ಲಿ ಮುಖ್ಯವಾದುದಾಗಿದೆ. ವಲ್ಲಭಾಚಾರ್ಯರ ಪ್ರೇಮಮಯ ಭಕ್ತಿಯ ಮಾರ್ಗವನ್ನು ಗೋಸ್ವಾಮಿ ವಿಠಲನಾಥ ಮುಂದುವರೆಸಿದ ಹೀಗೆ ಭಗವಂತನ ಪ್ರೇಮವನ್ನೂ ಅನುಗ್ರಹವನ್ನೂ, ಪಡೆಯಲು ಹಾತೊರೆದ ಅನೇಕ ಭಕ್ತರಿಗೆ ವಲ್ಲಭಾಚಾರ್ಯರ 'ಪುಷ್ಟಿಮಾರ್ಗ' ಬೆಂಬಲವನ್ನು ನೀಡಿತು. ಗೋಸ್ವಾಮಿ ವಿಠಲನಾಥ, ಪುಷ್ಟಿಮಾರ್ಗ ಸಂಪ್ರದಾಯಿಯಾಗಿ, ಕೃಷ್ಣನ ಲೀಲೆಗಳನ್ನು ವರ್ಣಿಸುತ್ತಿದ್ದ. ಪ್ರಮುಖರಾದ, ಎಂಟುಜನ ಭಕ್ತರನ್ನು ಆರಿಸಿಕೊಂಡು 'ಅಷ್ಟಚಾಪ' ಎಂಬ ಹೆಸರಿನಲ್ಲಿ ಅವರನ್ನು ಸಮಾವೇಶಗೊಳಿಸಿದ. ಹೀಗೆ ಅಷ್ಟಚಾಪ ಕವಿಗಳೆಲ್ಲರೂ ಪುಷ್ಟಿಮಾರ್ಗದವರೇ ಆಗಿದ್ದರು

ಅಷ್ಟಚಾಪ ಕವಿಗಳಲ್ಲಿ, ಪ್ರಧಾನನಾದವನೆಂದರೆ ಸೂರದಾಸ. ಒಬ್ಬ ಅಂಧಗಾಯಕನಾದ ಸೂರದಾಸ ಪ್ರಾರಂಭದ ಜೀವನದಲ್ಲಿ ಅನೇಕ ಕಷ್ಟಗಳನ್ನನುಭವಿಸಿದರೂ, ಅದೊಂದು ದಿನ ವಲ್ಲಭಾಚಾರ್ಯರ ಸಂಪರ್ಕಕ್ಕೆ ಬಂದು ರಾಧಾಕೃಷ್ಣರ ಆರಾಧನೆಯ ಮಹತ್ವವನ್ನರಿತುಕೊಂಡ. ರಾಧಾಕೃಷ್ಣರ ಲೀಲೆಗಳನ್ನು, ಅತ್ಯಂತ ರೋಮಾಂಚನಕಾರಿ ಅನುಭವ ಓದುಗರಿಗೆ ಉಂಟಾಗುವಂತೆ, ವರ್ಣಿಸಿದ್ದಾನೆ. ಸೂರದಾಸನಂತಹ ಸಂತರಿಗೆ ಭಾರತೀಯ ಸಾಹಿತ್ಯದಲ್ಲೇ ಏಕೆ ಜಗತ್ತಿನ ಸಾಹಿತ್ಯದಲ್ಲಿಯೇ ಪ್ರಮುಖವಾದ ಸ್ಥಾನ ಸಿಕ್ಕಿದೆ. ಸೂರದಾಸ ಒಂದು ಲಕ್ಷಕ್ಕೂ ಹೆಚ್ಚಿನ ಪದ್ಯಗಳನ್ನು ರಚಿಸಿದನೆಂಬ ಪ್ರತೀತಿಯಿದೆ. ಸೂರದಾಸನ ಪದ್ಯಗಳ ಸಂಗ್ರಹವೇ "ಸೂರಸಾಗರ". ಭಾಗವತ ದಶಮಸ್ಕಂಧದ ಕಥೆ ಸೂರದಾಸನಿಗೆ ಮೂಲ ಆಕರವಾಗಿದೆ. ಆತನ ಪದಗಳ ಆಕರ್ಷಣಾಶಕ್ತಿಯಿರುವುದು, ಬಾಲಕೃಷ್ಣನ ಮನಮೋಹಕವಾದ ಲೀಲಾವರ್ಣನೆಗಳ ಭಾಗ ಹಾಗೂ ರಾಧೆಯ ವಿರಹದ ಚಿತ್ರಣವಿರುವ ಭಾಗದಲ್ಲಿ ಎಂದು ಹೇಳಬಹುದು ವ್ರಜಭಾಷೆಯ, ಮಾಧುರ್ಯದ ಧಾರೆ ಪದ್ಯಗಳಲ್ಲಿ ತಾನೇ ತಾನಾಗಿ ಹರಿದಿದೆ

ಬಾಲಕೃಷ್ಣನು ಬೆಣ್ಣೆಯನ್ನು ತಿನ್ನುವ ಪ್ರಸಂಗ, ಇತರ ಗೋಪ ಬಾಲಕರೊಡನೆ ನಡೆಸುವ ಕ್ರೀಡೆಗಳು – ಎಲ್ಲದರ ಮನೋರಂಜಕವಾದ ಚಿತ್ರಣ ಸೂರದಾಸನ ಪದ್ಯಗಳಲ್ಲಿದೆ "ಮೈಯ್ಯಾ ಕಬಹು ಬಡೇಗಿ ಚೋಟಿ" ಎಂದು ತಾಯಿ ಯಶೋದೆಯನ್ನು ಮುದ್ದಾಗಿ ಕೇಳುವ ಬಾಲಕೃಷ್ಣ ತನ್ನ ಅಣ್ಣ ಬಲರಾಮ ಮಾಡಿದ ಕೀಟಲೆಗಳನ್ನು ತಿಳಿಸುತ್ತಾನೆ 'ನಂದ ಗೋರಾ ಜಸೋದಾ ಗೋರಿ ತುಮ ಕತ ಸ್ಯಾಮಸರೀರ' – 'ಅಮ್ಮಾ, ನಂದ ಗೌರವರ್ಣದವನು, ಯಶೋದೆ ಗೌರವರ್ಣದವಳು. ನೀನೇಕೆ ನೀಲಿಯವರ್ಣದವನಾದೆ?' ಎಂದು ನನ್ನನ್ನು ಹೀಯಾಳಿಸುವ ಬಲರಾಮನ ಮಾತುಗಳಿಂದ, ಗೋಪಬಾಲಕರೆಲ್ಲಾ ಹಾಸ್ಯ ಮಾಡಿ ನಗುತ್ತಾರೆ ಆದರಿಂದ ನಾನು ಆಡಲೂ ಹೋಗುವುದಿಲ್ಲ – ಹೀಗೆಂದ ಕೃಷ್ಣನ ಮಾತುಗಳಿಂದ ಮೋಹಿತಳಾದ ಯಶೋದೆ ಹೇಳುತ್ತಾಳೆ 'ಬಲಭದ್ರನು ಜನ್ಮದಿಂದ ಧೂರ್ತ – ಅವನನ್ನು, ಇಂದು ಶಿಕ್ಷಿಸುತ್ತೇನೆ'. ಸೂರದಾಸನ ಬಾಲಕೃಷ್ಣನ ಲೀಲಾ ವರ್ಣನೆಗಳನ್ನು ಎಷ್ಟು ವರ್ಣಿಸಿದರೂ ಅವು ಮುಗಿಯುವಂತಹುವಲ್ಲ.

ಮಧುರೆಗೆ ಕೃಷ್ಣ ಹೊರಟುಹೋದ ನಂತರ ರಾಧೆಯೊಡನೆ ಇತರ ಗೋಪಿಯರು ವಿರಹ ತಾಳಲಾರದೆ ಹಸಿರಾಗಿದ್ದ ಉದ್ಯಾನವನಗಳನ್ನೂ, ಪಶುಪಕ್ಷಿಗಳನ್ನೂ ತೆಗಳುತ್ತಾರೆ. "ಮಧುವನ ತುಮ ಕತ ರಹತ ಹರೆ". ಮಧುರಾಪಟ್ಟಣಕ್ಕೆ ಹೋಗುವ ಯಾತ್ರಿಕರ ಕೈಲೆಲ್ಲಾ ಕೃಷ್ಣನಿಗೆ ಸಂದೇಶಗಳನ್ನು ಕಳುಹಿಸುತ್ತಿದ್ದ ಗೋಪಿಯರ ಕಾಟ ತಾಳಲಾರದೆ ಅವರುಗಳು ಬೇರೊಂದು ಮಾರ್ಗದಿಂದ ಮಥುರೆಗೆ ಹೋಗುತ್ತಿದ್ದರಂತೆ! ಕೃಷ್ಣ ಉದ್ಧವನನ್ನು ಗೋಪಿಯರಿಗೆ ಉಪದೇಶ ಮಾಡಲು ಕಳುಹಿಸಿಕೊಡುತ್ತಾನೆ. ಉದ್ಧವನ ನಿರ್ಗುಣ, ನಿರಾಕಾರ, ಬ್ರಹ್ಮನ ವರ್ಣನೆ ಕೇಳಿದ ಗೋಪಿಯರು ಕೃಷ್ಣ ವಿರಹದಿಂದ ಮೊದಲೇ ನೊಂದವರಾಗಿ ಉದ್ಧವನನ್ನು ಚೆನ್ನಾಗಿ ಹೀಯಾಳಿಸುತ್ತಾರೆ. ಉದ್ಧವ ಗೋಪಿಯರ ಸಂವಾದದಲ್ಲಿ ಸೂರದಾಸ ಸಗುಣಧರ್ಮದ ಮೂಲಕ ನಿರ್ಗುಣ ಧರ್ಮವನ್ನು ಖಂಡಿಸಿದ್ದಾನೆ. ಭ್ರಮರ (ದುಂಬಿ) ವೊಂದನ್ನು ಆಧಾರವಾಗಿಟ್ಟುಕೊಂಡು ರಾಧೆಯೂ ಗೋಪಿಯರೂ ಉದ್ಧವನಿಗೆ ನೀಡಿದ ಉತ್ತರದ ನಿರೂಪಣಾ ಪದ್ಯಗಳನ್ನೊಳಗೊಂಡಿರುವುದೇ 'ಭ್ರಮರಗೀತೆ'. "ಉಧೋ ಮನ ನಾಹಿ ದಸ ಬೀಸ್" ಎನ್ನುವ ಗೋಪಿಯರು ತಮ್ಮ ಮನಸ್ಸೆಲ್ಲವೂ ಕೃಷ್ಣನಲ್ಲೇ ಇದೆ ಎನ್ನುತ್ತಾರೆ. ಮಾಧವನಿಲ್ಲದ ರಾಧೆಯ ರೀತಿಯೇ ವಿಪರೀತವಾಗಿದೆ 'ಬಿನುಮಾಧವ ರಾಧಾ ತನು ಸಜನೀ ಸಬ ವಿಪರೀತ ಭಈ'. ಗೋಪಿಯರ ದಾರುಣ ವ್ಯಥೆ ಹೀಗೆ ವ್ಯಕ್ತಗೊಂಡಿದೆ "ನಿಶಿದಿನ ಬರಸತ ನೈನ ಹಮಾರೆ ಸದಾ ರಹತ ವರ್ಷಾಋತು ಹಮ ಪರ ಜಬ ತೆ ಶ್ಯಾಮ ಸಿಧಾರೆ" ಗೋಪಿಯರ ಕಂಗಳು ಹರಿದರ್ಶನಕ್ಕಾಗಿ ಕಾದಿವೆ.



ಸೂರದಾಸ ಕೃಷ್ಣನ ಮಾಧುರ್ಯಮಯ ಉಪಾಸನೆಯನ್ನು ಮಾಡಿದನು. ಬೃಂದಾವನ, ರಾಧಾ–ಕೃಷ್ಣ, ಗೋಪಿಯರು, ನೀಲ ಯಮುನೆ ಇವಿಷ್ಟೇ ಸೂರದಾಸನ ಅಂತರಂಗ ಪ್ರಪಂಚವಾಗಿದ್ದಿತು ಸೂರದಾಸ ವಾತ್ಸಲ್ಯ ಹಾಗೂ ಶೃಂಗಾರ ರಸಗಳನ್ನು ತನ್ನ ಪದ್ಯಗಳಲ್ಲಿ ಅಳವಡಿಸಿಕೊಂಡಂತೆ ಇತರ ಕವಿಗಳು ಅಳವಡಿಸಿಕೊಳ್ಳಲಿಲ್ಲ. ಸೂರದಾಸನ ವಿನಯ ಪದಗಳು ಬಾಲಕೃಷ್ಣನ, ಯುವಕ ಕೃಷ್ಣನ ಲೀಲೆಗಳು, ಭ್ರಮರಗೀತೆಯ ಪ್ರಸಂಗ ಇವು ಅತ್ಯಂತ ಮರ್ಮಸ್ಪರ್ಶಿಯಾದ ಅನುಭವವನ್ನು ಓದುಗರಿಗೆ ಉಂಟುಮಾಡುತ್ತದೆ ಹಿಂದೀ ಕಾವ್ಯಗಗನದ ಸೂರ್ಯನಂತೆ ಸೂರದಾಸ ಎಂಬ ಉಕ್ತಿ ಚೆನ್ನಾಗಿ ಒಪ್ಪುತ್ತದೆ.

ಸೂರದಾಸನ ನಂತರ ಸ್ಥಾನ ನಂದದಾಸನದೆನ್ನಬಹುದು. ನಂದದಾಸನು ಗೋಸಾಯಿ ವಿಠಲನಾಥರ ಶಿಷ್ಯ. ನಾಭಾಜೀಯವರ 'ಭಕ್ತಮಾಲಾ'ದಲ್ಲಿಯೂ "ದೋ ಸೌ ಬಾವನ್ ವೈಷ್ಣವೋಂಕೀ ವಾರ್ತಾ" ಎಂಬ ಗ್ರಂಥದಲ್ಲಿಯೂ ನಂದದಾಸನ ವಿಷಯವಿರುವುದು ಗೋಚರಿಸು

ತ್ತದೆ. ಲಾವಣ್ಯ ಎಂಬ ಸುಂದರಿಯನ್ನು ನೋಡಿ ಮೋಹಗೊಂಡ ನಂದದಾಸ, ಆಕೆ ಗೋಕುಲಕ್ಕೆ ಹೊರಟುಹೋದಾಗ ಅವಳ ಹಿಂದೆಯೇ ಗೋಕುಲಕ್ಕೆ ಹೋದ. ಅಲ್ಲಿ ವಿಠಲದಾಸರನ್ನು ಕಂಡು ಅವರಿಂದ ಪ್ರೇರಿತರಾಗಿ, ಭಕ್ತಿವಶನಾಗಿ ಕೃಷ್ಣನನ್ನು ಆರಾಧಿಸತೊಡಗಿದನಂತೆ! ಕೃಷ್ಣಪರಮಾತ್ಮನ ರಾಸಲೀಲೆಗಳನ್ನು ರೋಮಾಂಚನಕಾರಿಯಾಗಿ ವರ್ಣಿಸಿದ್ದಾನೆ ನಂದದಾಸ. ನಂದದಾಸ ಅನೇಕ ಕೃತಿಗಳನ್ನು ರಚಿಸಿರುವನೆಂಬ ಅಭಿಪ್ರಾಯವಿದೆ. ಆದರೆ ಅವನ ಕೃತಿಗಳಲ್ಲಿ 'ರಾಸಪಂಚಾಧ್ಯಾಯಿ, ಭ್ರಮರಗೀತ, ಅನೇಕಾರ್ಥಮಂಜರೀ, ಅನೇಕಾರ್ಥನಾಮಮಾಲಾ' ಗಳು ಮುಖ್ಯವಾದವು. ಭ್ರಮರಗೀತೆಯ ಪ್ರಸಂಗವನ್ನು ನಂದದಾಸನು ತನ್ನದೇ ಆದ ಕೌಶಲದಿಂದ ನಿರ್ಮಿಸಿದ್ದಾನೆ

ವಲ್ಲಭಾಚಾರ್ಯರ ಶಿಷ್ಯನಾದ ಕೃಷ್ಣದಾಸನು ಅನೇಕ ಪದ್ಯಗಳನ್ನು ರಚಿಸಿದ್ದು ಅವು 'ಜುಗಲ ಭಾನ ಚರಿತ್ರ' ಎಂಬುದರಲ್ಲಿ ಸಂಗ್ರಹಿತವಾಗಿವೆ. ಜಾತಿಯಲ್ಲಿ ಹಿಂದುಳಿದವನಾದ ಕೃಷ್ಣದಾಸನು ಭ್ರಮರ ಗೀತೆಯನ್ನೂ–ಪ್ರೇಮತತ್ತ್ವನಿರೂಪಣ, ಎಂಬ ಕೃತಿಯನ್ನೂ ಬರೆದಿದ್ದಾನೆ. 'ಮೋ ಮನ ಗಿರಿಧರಛವಿ ಪರ ಅಟಕ್ಯೋ, ಸಬಲ ಸ್ಯಾಮ ಘನ ವರನ ನೀಲ ಹ್ವೈ–ಫಿರ ಚಿತ ಅನತ ನ ಭಟಕ್ಯೋ' ಗಿರಿಧರ ಕೃಷ್ಣನ ರೂಪದಿಂದ ಮೋಹಿತನಾದ ಕೃಷ್ಣದಾಸನು ನೀಲವರ್ಣದ ಸುಂದರಾಂಗನಾದ ಕೃಷ್ಣನನ್ನು ಬಿಟ್ಟು ಅನ್ಯರ ಮೇಲೆ ನನ್ನ ಮನಸ್ಸು ನಿಲ್ಲದು ಎಂದಿದ್ದಾನೆ. ತಾನು ಕೃಷ್ಣನದಾಸನೇ ಎಂದು ಹೇಳಿಕೊಂಡಿರುವ ಕೃಷ್ಣದಾಸನ ಹೆಸರೂ ಸಹ ಆ ಮಾತಿಗೆ ಪುಷ್ಟಿಯನ್ನು ನೀಡುತ್ತದೆ.

ಸುಮಾರು ಎಂಟುನೂರಕ್ಕೂ ಹೆಚ್ಚಿನ ಪದ್ಯಗಳನ್ನೊಳಗೊಂಡಿರುವ 'ಪರಮಾನಂದ ಸಾಗರ'ದ ಕರ್ತೃವಾದ ಪರಮಾನಂದದಾಸನು ಕನೌಜ್‌ನವನಾಗಿದ್ದನು. ಪರಮಾನಂದದಾಸನ ಪದ್ಯಗಳಲ್ಲಿರುವ ತೀವ್ರತೆಯನ್ನು, ಭಕ್ತಿ ಪಾರಮ್ಯವನ್ನೂ ಅನುಭವಿಸಿದ ಭಕ್ತರು ಕೆಲವುಕಾಲ ಮೂರ್ಛಿತರಾಗುತ್ತಿದ್ದರಂತೆ! ಅಷ್ಟೇಕೆ ಪರಮಾನಂದದಾಸನ ಗುರುಗಳೂ ಈ ಪದ್ಯಗಳ ಭಾವ–ರಸಗಳ ಆವೇಶದಿಂದ ಮಂತ್ರಮುಗ್ಧರಾಗುತ್ತಿದ್ದರಂತೆ. ಯಶೋದಾ, ಕೃಷ್ಣ, ಗೋಪಿಯರು, ಗೊಲ್ಲರು, ಹಸುಗಳು, ಯಮುನೆ ಇವೆಲ್ಲಾ ಇಲ್ಲದೇ ಇರುವ ವೈಕುಂಠ ಲೋಕಕ್ಕೆ ಹೋಗಲು ಪರಮಾನಂದದಾಸನಿಗೆ ಇಷ್ಟವಿಲ್ಲ. ಆದರೆ ಇವೆಲ್ಲಾ ಇರುವ ವ್ರಜ ಭೂಮಿಯ (ಬೃಂದಾವನ) ಧೂಳಿನ ಕಣ ತನ್ನ ಶಿರದ ಮೇಲೆ ಬಿದ್ದರೂ ಪುನೀತನಾಗುತ್ತೇನೆ ಎಂದಿದ್ದಾನೆ

ಕೃಷ್ಣನ ಬಾಲಲೀಲೆಗಳನ್ನೂ, ಪ್ರೇಮಲೀಲೆಗಳನ್ನೂ ಅನೇಕ ಪದ್ಯಗಳಲ್ಲಿ ಕುಂಭನದಾಸ ವರ್ಣಿಸಿದ್ದಾನೆ. ಕುಂಭನದಾಸನ ಪದ್ಯಗಳು ಯಾವ ಪುಸ್ತಕದಲ್ಲಿಯೂ ಸಂಗ್ರಹಿತವಾಗಿಲ್ಲ. ಧನ, ಸುಖ, ಭೋಗಗಳಿಂದ ವಿರಕ್ತನಾಗಿದ್ದ ಕುಂಭನದಾಸ. ಬಾದಶಹ ಅಕ್ಬರನು ಕುಂಭನದಾಸನನ್ನು ಫತೇಪುರಸಿಕ್ರಿಗೆ ಕರೆಸಿಕೊಂಡು ಸನ್ಮಾನ ಮಾಡಿದರೂ ಆ ವೈಭವೋಪೇತವಾದ ವಾತಾವರಣ ಕುಂಭನದಾಸನಿಗೆ ರುಚಿಸಲಿಲ್ಲವಂತೆ!

ಕುಂಭನದಾಸನ ಮಗನಾದ ಚತುರ್ಭುಜದಾಸನು 'ದ್ವಾದಶಯಶ, ಭಕ್ತಿಪ್ರತಾಪ, ಹಿತಭೂಮಂಗಲ'ಗಳೆಂಬ ಕೃತಿಗಳನ್ನು ರಚಿಸಿದ್ದಾನೆ. ಕೃಷ್ಣಲೀಲೆಗಳ ವರ್ಣನೆಗಳು ಚತುರ್ಭುಜದಾಸನ ಪದ್ಯಗಳಲ್ಲಿವೆ. ಗೋಸಾಯಿ ವಿಠಲದಾಸರು ಚತುರ್ಭುಜದಾಸನ ಗುರುಗಳಾಗಿದ್ದರು. ಛೀತಾಸ್ವಾಮಿ ಎಂಬುವರು ಸರಸಶೈಲಿಯಲ್ಲಿ ಕೃಷ್ಣನನ್ನು ಕುರಿತು ಪದ್ಯಗಳನ್ನು ರಚಿಸಿದ್ದಾರೆ. ವ್ರಜಭೂಮಿಯ ಬಗೆಗೆ ಇವರಿಗೆ ಅಭಿಮಾನವಿತ್ತು. ಗೋವರ್ಧನಗಿರಿಯ ನಿವಾಸಿಗಳೆನ್ನಲಾದ "ಗೋವಿಂದ ಸ್ವಾಮಿ", ಗಿರಿಧಾರಿಯಾದ ಕೃಷ್ಣನನ್ನು ಸ್ತುತಿಸಿ, ತಮ್ಮ ಭಾವನೆಗಳನ್ನು ಪದ್ಯರೂಪದಲ್ಲಿ ಹೊರಗೆಡವಿದ್ದಾರೆ. ಪ್ರಸಿದ್ಧ ಗಾಯಕನಾದ ತಾನಸೇನನು ಗೋವಿಂದ ಸ್ವಾಮಿಗಳ ಹಾಡುಗಳನ್ನು ಕೇಳಲು ಬರುತ್ತಿದ್ದನೆಂಬ ಐತಿಹ್ಯವಿದೆ

ವಲ್ಲಭಾಚಾರ್ಯರಿಂದ ಪ್ರಣೀತಗೊಂಡ ಪುಷ್ಟಿಮಾರ್ಗದ ಅನುಸರಣೆ, ಭಗವದ್‌ರತಿಯ ಉತ್ಕರ್ಷದ ನಿರೂಪಣೆ, ತಾವಿದ್ದ ಸಮಾಜದ ಪರವಾಗಿ ಉದಾಸೀನತೆ, ಕೃಷ್ಣನಲ್ಲಿ ಅಪಾರವಾದ ಪ್ರೇಮವನ್ನು ಪ್ರದರ್ಶಿಸಿದ ಬಗೆ– ಈ ಲಕ್ಷಣಗಳನ್ನು ಈ ಕವಿಗಳ ಕೃತಿಗಳಲ್ಲಿ ಮೂಡಿಬಂದಿರುವುದನ್ನು ಗುರುತಿಸಬಹುದಾಗಿದೆ. ವ್ರಜಭಾಷೆಯ ಸಹಜವಾದ, ಸರಸವಾದ, ಸುಲಭವಾದ, ಸುಂದರವಾದ ಶೈಲಿಯಲ್ಲಿ ಮೂಡಿಬಂದ ಪದ್ಯಗಳು ಸೊಗಸಾಗಿವೆ.

ಶೃಂಗಾರ ಕಾಲದಲ್ಲಿ ರಾಧಾಕೃಷ್ಣರ ಶೃಂಗಾರಮಯವಾದ ಸನ್ನಿವೇಶಗಳನ್ನೂ, ಲೀಲೆಗಳನ್ನೂ ಕೆಲವು ಕವಿಗಳು ವಿವರವಾಗಿ ನಿರೂಪಿಸಿದ್ದಾರೆ. ಶೃಂಗಾರ ಕಾಲದಲ್ಲಿ ರಚಿತಗೊಂಡ ಕೃಷ್ಣಸಂಬಂಧೀ ಸಾಹಿತ್ಯದಲ್ಲಿ ಕೆಲವೊಂದು ಕಡೆಗಳಲ್ಲಿ ಅಶ್ಲೀಲದ ಪರಮಾವಧಿಯೋ ಎಂಬಂತೆ ರಾಧಾ–ಕೃಷ್ಣರ ವರ್ಣನೆ ಬಂದಿದೆ. ವಿಲಾಸಿರಾಜರ ಆಶ್ರಿತರಾದ ಈ ಕವಿಗಳು ವಿಲಾಸಮಯವಾದ ಕೃತಿಗಳನ್ನೇ ಬರೆದುದರಲ್ಲಿ ಆಶ್ಚರ್ಯಪಡುವಂಹತುದೇನೂ ಇಲ್ಲ. ಬಿಹಾರಿಲಾಲ್, ದೇವ ಕವಿ, ಚಿಂತಾಮಣಿ ತ್ರಿಪಾಠಿ, ಕವಿ ಬೇನಿ ನವಾಜ್, ದೂಲಹ, ಪದ್ಮಾಕರ, ಆಲಮ್ ಘನಾನಂದ್, ರಸಖಾನ್, ಬೋಧಾ, ಸೇನಾಪತಿ ಮುಂತಾದ ಅದೆಷ್ಟೋ ಕವಿಗಳು ಈ ಕಾಲದಲ್ಲಿ ಆಗಿಹೋದರು. ಇವರೆಲ್ಲರೂ ನಾನಾದೃಷ್ಟಿಕೋನಗಳಿಂದ ರಾಧಾ-ಕೃಷ್ಣರ ಲೀಲೆಗಳನ್ನು ವರ್ಣಿಸಿದವರೇ ಆಗಿದ್ದರು.

(26ನೇ ಪುಟ ನೋಡಿ)

# ದೀಪಾವಳಿ

ಸಂಸ್ಕೃತಿಗೆ ತವರೂರು ಆದ ಭರತ ಖಂಡದಲ್ಲಿ ಆಚರಿಸುವ ಹಬ್ಬಗಳಲ್ಲೆಲ್ಲಾ ಹಿರಿಯ ಹಬ್ಬ ದೀಪಾವಳಿ. ನವರಾತ್ರಿ ಸಡಗರ ಮುಗಿಯುತ್ತಿದ್ದಂತೆ ಮಕ್ಕಳು ದೀಪಾವಳಿಯ ಕನಸನ್ನು ಕಾಣುತ್ತಿರುತ್ತಾರೆ. ದಸರೆಗೂ ದೀಪಾವಳಿಗೂ ಸುಮಾರು ಇಪ್ಪತ್ತು ದಿವಸಗಳ ಅಂತರವಿರುತ್ತದೆ. ದೀಪಾವಳಿ ಎಂದೊಡನೆ ನಮ್ಮ ಕಣ್ಣೆದುರಿಗೆ ಸಾಲು ಸಾಲಾಗಿ ನಕ್ಷತ್ರಗಳಂತೆ ಮಿರುಗುವ ದೀಪಗಳ ಚಿತ್ರವು ಮೂಡಿ ಬರುತ್ತದೆ. ಸಾಲು ದೀಪಗಳಿಂದ ರಂಜಿಸುವ ದೀಪಗಳ ಸಾಲಿಗೆ ದೀಪಾವಳಿ ಎನ್ನುವರು. ಕತ್ತಲೆಯ ಅಂಧಕಾರವನ್ನು ಉಜ್ವಲ ಪ್ರಕಾಶದಿಂದ ಬೆಳಗಿಸುವಂತಹ ಪರ್ವವಾಗಿದೆ.

ದೀಪಾವಳಿಯು ಮುಖ್ಯವಾಗಿ ಮೂರು ದಿವಸಗಳ ಹಬ್ಬವಾಗಿದೆ. ಆಶ್ವೀಜ ತಿಂಗಳಲ್ಲಿ ಕೃಷ್ಣ ಚತುರ್ದಶಿಯಿಂದ ಕಾರ್ತಿಕ ಶುದ್ಧ ಪ್ರತಿಪದೆಯವರೆಗೆ ಈ ಹಬ್ಬವನ್ನು ಆಚರಿಸುತ್ತಾರೆ. ಈ ಮೂರು ದಿನಗಳಲ್ಲಿ, ದೇವಾಲಯ, ಮನೆ, ಮಠಗಳಲ್ಲಿ ದೀಪೋತ್ಸವ ಮಾಡುತ್ತಾರೆ ದೀಪಾವಳಿಯನ್ನು ಆಚರಿಸಲು ಮುಖ್ಯವಾಗಿ ಎರಡು ಕಾರಣಗಳಿವೆ. ಮೊದಲ ಕಾರಣ ಭಾರತವು ಕೃಷಿ ಪ್ರಧಾನವಾದ ದೇಶವಾಗಿದೆ. ಭೂಮಿಯಲ್ಲಿ ಉತ್ತಮ ಬೆಳೆ ಬೆಳೆದು ದೇಶವು ಸಂಪತ್ತು ಸಮೃದ್ಧಿಯಿಂದ ಕೂಡಿರಲಿ, ಎಲ್ಲೆಲ್ಲೂ ಪಚ್ಚೆಪೈರುಗಳು ಕಾಣಲಿ ಎಂಬ ಸಂತೋಷಕ್ಕಾಗಿ ಆಚರಿಸುತ್ತಾರೆ.

ದೀಪಾವಳಿಯನ್ನು ಆಚರಿಸುವ ಎರಡನೆಯ ಕಾರಣವು ಮನೆ ಮಠ ಪರಿಸರವನ್ನು ನೈರ್ಮಲ್ಯಗೊಳಿಸುವುದಕ್ಕಾಗಿದೆ. "ಆರೋಗ್ಯವೇ ಭಾಗ್ಯ" ಎಂಬ ಗಾದೆಯ ಮಾತಿನಂತೆ ಜನರು ಆರೋಗ್ಯ ಕಾಪಾಡಿಕೊಳ್ಳಲು ಈ ಹಬ್ಬವನ್ನು ಆಚರಿಸುತ್ತಾರೆ.

ದೀಪಾವಳಿಯು ಭಾರತದ ಪ್ರಾಚೀನ ಹಬ್ಬವಾಗಿದೆ. ಪುರಾಣಗಳಲ್ಲಿನ ರಾಮಾಯಣ ಮಹಾಭಾರತ, ಭಾಗವತಕ್ಕೆ ಸಂಬಂಧಿಸಿದಂತೆ ಕೆಲವು ಶುಭ ದಿವಸಗಳು ಈ ದೀಪಾವಳಿಯ ವೈಭವದಲ್ಲೇ ನಡೆದಿವೆಯೆಂದು ನಾವು ಪುರಾಣಗಳಿಂದ ತಿಳಿಯುತ್ತೇವೆ. ದೀಪಾವಳಿಯ ಮೊದಲ ದಿನ ನರಕ ಚತುರ್ದಶಿಯಾಗಿರುತ್ತದೆ ಅಂದು ಶ್ರೀ ಕೃಷ್ಣನು ಪ್ರಾಗ್ಜ್ಯೋತಿಷ ರಾಜ್ಯದ ದುಷ್ಟ ನರಕಾಸುರನನ್ನು ಕೊಂದ ದಿವಸವಾಗಿದೆ. ದುಷ್ಟರಾಕ್ಷಸನು ನಿರ್ನಾಮವಾಗಿ ದೇಶಕ್ಕೆ ಮಂಗಲ ಒದಗಿತು ಎಂಬ ಸಂತೋಷಕ್ಕಾಗಿ ನಾವು ಎಣ್ಣೆ ಹಚ್ಚಿಕೊಂಡು ಸ್ನಾನವನ್ನು ಮಾಡುತ್ತೇವೆ. ಅಲ್ಲದೆ ಆತನು ಸೆರೆಯಲ್ಲಿ ಇರಿಸಿದ ಹದಿನಾರು ಸಾವಿರ ಕನ್ಯೆಯರನ್ನು ಶ್ರೀ ಕೃಷ್ಣ ಬಿಡುಗಡೆ ಮಾಡಿದನೆಂದು ಕಥೆಯಿದೆ.

ದೀಪಾವಳಿಯ ಎರಡನೆಯ ದಿನವು ಲಕ್ಷ್ಮೀ ಪೂಜೆಯಾಗಿದೆ. ಈ ದಿನ ವ್ಯಾಪಾರಸ್ಥರು ವಿಶೇಷವಾಗಿ ಲಕ್ಷ್ಮೀ ಪೂಜೆ ಮಾಡುತ್ತಾರೆ. ತಮ್ಮ ಹೊಸ ವರ್ಷವನ್ನು ಆರಂಭಿಸುತ್ತಾರೆ. ಹಿಂದಿನ ಲೆಕ್ಕ ಪತ್ರಗಳನ್ನು ತೀರಿಸಿ ಹೊಸ ಲೆಕ್ಕ ಪತ್ರಗಳನ್ನು ಪ್ರಾರಂಭಿಸುತ್ತಾರೆ, ತಮ್ಮ ತಮ್ಮ ಅಂಗಡಿಗಳನ್ನು ಅಲಂಕರಿಸಿಕೊಳ್ಳುವರು. ಲಕ್ಷ್ಮೀ ಪೂಜೆಯ ನಿಮಿತ್ತ ಗುರುಗಳಿಗೆ ದಾನ – ದಕ್ಷಿಣೆಗಳನ್ನು ಕೊಡುವರು.

ದೀಪಾವಳಿಯ ಮೂರನೆಯ ದಿನವು ಬಹಳ ಪ್ರಸಿದ್ಧಿ ಪಡೆದ ದಿವಸವಾಗಿದೆ. ಈ ದಿನವನ್ನು ಬಲಿಪಾಡ್ಯಮಿಯೆಂದೂ ಕರೆಯುತ್ತಾರೆ. ವಿಷ್ಣುವು ವಾಮನ ಅವತಾರದಲ್ಲಿ ಬಂದು ಬಲಿ ಚಕ್ರವರ್ತಿಯನ್ನು ಪಾತಾಳಕ್ಕೆ ತುಳಿದ ದಿನವು ಇದೇ ಆಗಿದೆ. ಬಲಿಯ ಭಕ್ತಿ ಉದಾರ ಹೃದಯವನ್ನು ಮೆಚ್ಚಿದ ವಿಷ್ಣುವು ಆತನ ದ್ವಾರಪಾಲಕನಾಗಿರಲು ಒಪ್ಪಿಕೊಂಡನು. ಇದಕ್ಕಾಗಿ ಈ ದಿನವನ್ನು ಬಲಿ ಪ್ರತಿಪದೆಯೆಂದೂ ಹೇಳುತ್ತಾರೆ. ಬಲಿ ಚಕ್ರವರ್ತಿಯ ನೆನಪಿಗಾಗಿ ಮನೆಯ ಮುಂದೆ ಆತನ ಪ್ರತಿಮೆ ಮಾಡಿ ಪೂಜಿಸುವ ಪರಿಪಾಠವಿದೆ. ಶ್ರೀ ರಾಮಚಂದ್ರನು ಹದಿನಾಲ್ಕು ವರ್ಷ ವನವಾಸಮಾಡಿ ಅಯೋಧ್ಯೆಗೆ ಹಿಂದಿರುಗಿದ ದಿನ ಈ ದಿನವೇ ಆಗಿದೆ. ಶ್ರೀ ರಾಮನು ತಂದೆಯ ಆಜ್ಞೆಯನ್ನು ಪಾಲಿಸಲು ವನವಾಸವನ್ನು ಕೈಗೊಂಡು ಕೊನೆಗೆ ಲಂಕೆಯಲ್ಲಿ ರಾವಣನನ್ನು ಕೊಂದು ಅಯೋಧ್ಯೆಗೆ ಈ ದಿನವೇ ಬಂದು ಪಟ್ಟಾಭಿಷೇಕ ಮಾಡಿಸಿಕೊಳ್ಳುತ್ತಾನೆ.

ಶ್ರೀ ಗಣಪತಿಭಟ್ಟ, ಆರ್ತಿಕಜೆ



ಈ ದಿನ ಗೋವುಗಳ ಪೂಜೆಯನ್ನು ಪರಿಪಾಠವಿದೆ. ಗೋಪಾಲಕರು ಶ್ರೀಕೃಷ್ಣನ ಆಜ್ಞೆಯಂತೆ ಇಂದ್ರನ ಪೂಜೆಯನ್ನು ಬಿಟ್ಟು ಗೋವರ್ಧನ ಗಿರಿಯ ಪೂಜೆ, ಗೋವುಗಳ ಪೂಜೆಯನ್ನು ಮಾಡಲು ಆರಂಭಿಸಿದರು.

(28 ನೇ ಪುಟ ನೋಡಿ)

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯುವರಿಂದ ಶುದ್ಧ ಹಾಲಿನ ಮಾರಾಟ

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7–ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕೇಂಟಿನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8–30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ. ಶ್ರೀ ವೆಂಕಟೇಶ್ವರನ ಉದ್ದಾಮ ಭಕ್ತ, ಕವಿ ಅನ್ನಮಾಚಾರ್ಯರ ಅಂಚೆಚೀಟಿಯನ್ನು ಬಯಸುವವರು ಕೊಂಡುಕೊಳ್ಳಬಹುದು.

ದೇಶಾದ್ಯಂತ ಪ್ರತಿ ವರ್ಷವೂ ಕಾರ್ತೀಕ ಶುದ್ಧ ಸಪ್ತಮಿಯಂದು ಆಚರಿಸುವ ಯಾಜ್ಞವಲ್ಕ್ಯ ಜಯಂತಿ ಆಧ್ಯಾತ್ಮಿಕ ಸಂಕೇತವಾಗಿದೆ. ಸನಾತನ ಧರ್ಮದ ಹಾಸುಹೊಕ್ಕಾದ ಈ ಜಯಂತ್ಯೋತ್ಸವ ಅಹರ್ನಿಶಿ ಮಾನವ ಕಲ್ಯಾಣಕ್ಕೆ ಶ್ರಮಿಸಿದ ಮಂತ್ರದ್ರಷ್ಟಾರರಿಗೆ ಸಲ್ಲಿಸುವ ಅಪೂರ್ವ ಗೌರವ. ಧಾರ್ಮಿಕ ಕ್ಷೇತ್ರವಾದ ಮುಳಬಾಗಿಲಿನ ಯಾಜ್ಞವಲ್ಕ್ಯ ಆಶ್ರಮದಲ್ಲಿ ಅಂದು ಹಬ್ಬದ ಸಂತಸ. ಇಲ್ಲಿ ನೆಲೆಸಿರುವ ಯಾಜ್ಞವಲ್ಕ್ಯ ಮತ್ತು ಭಗವಾನ್ ಸೂರ್ಯನಾರಾಯಣ ಸ್ವಾಮಿಯವರುಗಳ ಸನ್ನಿಧಿ ಪವಿತ್ರವಾಗಿದ್ದು, ಭಕ್ತಜನರ ಆಶೋತ್ತರಗಳು ಈಡೇರುತ್ತಿರುವುದು ಗಮನಾರ್ಹ. ಋಷಿ ಮುನಿಗಳ ಇಚ್ಛಾಸ್ವರೂಪವನ್ನು ಸಾಂಕೇತಿಸುವಂತೆ ಹೋಮ, ಜಪ, ತಪ ಹವನಾದಿಗಳು ನಡೆದು ಲೋಕಕ್ಷೇಮವನ್ನು ಬಯಸಲಾಗುತ್ತದೆ. ವಿಶ್ವಮಾನವ ಕಲ್ಯಾಣವೆಂಬ ಹಿಂದೂಧರ್ಮದ ವಿಶಾಲದೃಷ್ಟಿಯಿಂದ ಮಾರ್ತಾಂಡ ಶಾಂತಿ ಹೋಮ ಇಲ್ಲಿ ನಡೆದು ರಾಜ್ಯದಲ್ಲಿಯೇ ಈ ಆಶ್ರಮ ತನ್ನ ಹಿರಿಮೆಯನ್ನು ಉಳಿಸಿಕೊಂಡಿದೆ. ಇದು ಯಾಜ್ಞವಲ್ಕ್ಯರ ಪೂರ್ಣ ಮಹಿಮೆಗೆ ದ್ಯೋತಕವಾಗಿದ್ದು, ಭಗವಾನ್ ಸೂರ್ಯನಾರಾಯಣ ಅನುಗ್ರಹದಿಂದ ಪಾವನವಾಗಿದೆ.

ನಾಲ್ಕುವರೆ ಸಾವಿರ ವರ್ಷಗಳ ಹಿಂದೆ ಹೋಮ ಹವನಾದಿಗಳ ಕಂಪಿನಲ್ಲಿ ಮೈಮರೆತು ಕರ್ಮಯೋಗಿಗಳಾಗಿದ್ದ ಆದರ್ಶದಂಪತಿಗಳಾದ ಬ್ರಹ್ಮರಾತ ಮತ್ತು ಸುನಂದಾ ದೇವಿಯರಿಗೆ ಯಜ್ಞೇಶ್ವರನ ವರವಾಗಿ ಯಾಜ್ಞವಲ್ಕ್ಯರು ಜನಿಸಿದ್ದು ವಿಶ್ವದ ಮಹಾ ಸೌಭಾಗ್ಯವೆಂದೇ ಹೇಳಬಹುದು. ಬಾಲಲೀಲೆಗಳಿಂದ ತೃಪ್ತಿಪಡಿಸಿದ ಅವರು ಸೂಕ್ತ ಕಾಲದಲ್ಲಿ ಬ್ರಹ್ಮರಾತರಿಂದ ಬ್ರಹ್ಮೋಪದೇಶವನ್ನು ಪಡೆದರು. ವರ್ಧಮಾನಪುರದ ಸುಪ್ರಿಯ ರಾಜನಲ್ಲಿ ಕುಲಪತಿಗಳಾಗಿದ್ದ ಸೋದರಮಾವ ವೈಶಂಪಯನರಲ್ಲಿ ತಮ್ಮ ವ್ಯಾಸಂಗವನ್ನು ಆರಂಭಿಸಿದರು. ವೇದವ್ಯಾಸರಿಂದ ಅನುಗ್ರಹಿಸಲ್ಪಟ್ಟ ಯಜುರ್ವೇದವನ್ನು ವೈಶಂಪಯನರು ಯಾಜ್ಞವಲ್ಕ್ಯರಿಗೆ ಬೋಧಿಸುತ್ತಿದ್ದರು. ಶಿಷ್ಯ ಸಮೂಹದಲ್ಲಿ ಮೆಚ್ಚುಗೆಗೆ ಪಾತ್ರರಾದ ಯಾಜ್ಞ

# ಯಾಜ್ಞವಲ್ಕ್ಯ

ವಲ್ಕ್ಯರು ಸ್ವಾಭಿಮಾನಿಗಳಾಗಿದ್ದರೆಂಬುದರಲ್ಲಿ ಸಂಶಯವಿಲ್ಲ. ವೈಶಂಪಯನರ ವಿದ್ಯಾಶ್ರಮದ ರಾಜಪೋಷಕನಾದ ಸುಪ್ರಿಯನು ಕರ್ಮ ಭ್ರಷ್ಟತೆಯಿಂದ ವ್ಯಾಧಿಗ್ರಸ್ತನಾದಾಗ, ತಮ್ಮ ಶಿಷ್ಯ ಸಮೂಹವನ್ನು ಸರದಿಯಂತೆ ಆಶೀರ್ವದಿಸಲು ಕಳುಹಿಸುತ್ತಿದ್ದರು. ಒಮ್ಮೆ ಯಾಜ್ಞವಲ್ಕ್ಯರು ರಾಜನ ಬಳಿ ಹೋದಾಗ, ಇತರ ಶಿಷ್ಯರನ್ನು ಆಸಡ್ಡೆ ಮಾಡಿದಂತೆ ಇವರನ್ನೂ ನೋಡಿದ. ರಾಜನ ರಜೋಗುಣವನ್ನು ಕಂಡ ಯಾಜ್ಞವಲ್ಕ್ಯರು ತಮ್ಮ ದಿವ್ಯ ತಪೋಬಲದ ಮಹಿಮೆ ವ್ಯಕ್ತಪಡಿಸಿ ಆಶೀರ್ವದಿಸದೆ ಹಿಂತಿರುಗಿ ಬಂದರು. ಆದರೆ ರಾಜನು ವೈಶಂಪಯನರ ಮುಖಾಂತರ ಪುನಃ ಯಾಜ್ಞವಲ್ಕ್ಯರ ಬೆಂಬತ್ತಿದ. ಗುರುಗಳು ರಾಜನನ್ನು ಆಶೀರ್ವದಿಸಲು ಒತ್ತಾಯಪಡಿಸಿದಾಗ ಸಕಾರಣದಿಂದ ನಿರಾಕರಿಸಿದರು. ಮಾನವನ ಕಲ್ಯಾಣಕ್ಕಾಗಿ ಶುಕ್ಲಯಜುರ್ವೇದದ ಅವಶ್ಯಕತೆಯನ್ನು ತಮ್ಮ ದಿವ್ಯ ದೃಷ್ಟಿಯಿಂದ ಅರಿತು ಈ ಸನ್ನಿವೇಶವನ್ನು ಅವರು ಬಳಸಿಕೊಂಡಿದ್ದರು. ರಾಜಕೃಪಾ ಪೋಷಿತರಾದ ವೈಶಂಪಯನರು ತಾವು ಕಲಿಸಿದ್ದ ಯಜುರ್ವೇದವನ್ನು ವಮನ ಮಾಡಲು ಆದೇಶಿಸಿದರು. ಅದರಂತೆ ಯಾಜ್ಞವಲ್ಕ್ಯರು ಕೆಂಡದರೂಪದಲ್ಲಿ ವಮನ ಮಾಡಿದಾಗ ಇತರೆ ಶಿಷ್ಯರು ತಿತ್ತಿರಿ ಪಕ್ಷಿ ರೂಪದಲ್ಲಿ ಸ್ವೀಕರಿಸಿದರು.



ಶ್ರೀ ಯಾಜ್ಞವಲ್ಕ್ಯರು.



ಶ್ರೀ ಸೂರ್ಯನಾರಾಯಣಸ್ವಾಮಿ

ವೈಶಂಪಯನರನ್ನು ತೊರೆದ ಯಾಜ್ಞವಲ್ಕ್ಯರು ಭಾಷ್ಕಲರಿಂದ ಋಗ್ವೇದವನ್ನು, ಹಿರಣ್ಯನಾಭರಿಂದ ಸಾಮವೇದವನ್ನು, ಅರುಣಿ ಮುನಿಗಳಿಂದ ಅಥರ್ವಣವೇದವನ್ನು ಅಭ್ಯಸಿಸಿದರು. ಚತುರ್ವೇದಿಗಳಾಗಬೇಕೆಂಬ ಆಸೆಯೊಂದು ಹೃದಯದ ಮೂಲೆಯಲ್ಲಿ ಕೊರೆಯುತ್ತಿತ್ತು. ಇದರಿಂದ ವೇದಮಾತೆ ಗಾಯತ್ರಿಯನ್ನು ಅನನ್ಯ ನಿಷ್ಠೆಯಿಂದ ಆರಾಧಿಸಿದರು. ಪ್ರಸನ್ನಳಾದ ಗಾಯತ್ರಿ ದೇವಿಯು ಚತುರ್ಮುಖನಿಂದ ಸೂರ್ಯದೇವನ ವಶದಲ್ಲಿದ್ದ ಯಜುರ್ವೇದವನ್ನು ಪಡೆಯಲು ಗೃಹಸ್ಥಾಶ್ರಮಿಯಾಗಿ ಆದಿತ್ಯ ವ್ರತವನ್ನು ಆಚರಿಸಲು ಹೇಳಿದಳು.

ಮಿಥಿಲಾನಗರದ ಬಳಿ ಪ್ರಶಾಂತವಾದ ಆಶ್ರಮದಲ್ಲಿ ವಾಸಿಯಾಗಿದ್ದ " ಕತ " ಮಹ

ಚಿತ್ರ ಲೇಖನ:

**ಶ್ರೀ ಜಿ. ಶ್ರೀಧರ್**

ಆಕಾಶಮೇಕಂ ಹಿ ಯಥಾ ಘಟಾದಿಷು ಪೃಥಗ್ಭವೇತ್,
ತಥಾತ್ಮೈಕೋ ಹ್ಯನೇಕಶ್ಚ ಜಲಧಾರೇಷ್ವಿ ವಾಂಶುಮಾನ್.

(ಯಾಜ್ಞವಲ್ಕ್ಯ ಸ್ಮೃತಿ 3-144)

ಆಕಾಶ ಒಂದೇ ಆದರೂ ಮೋಡಗಳಿಂದಾಗಿ ವಿಭಿನ್ನವಾಗಿ ತೋರುವಂತೆ, ಒಬ್ಬನೇ ಸೂರ್ಯನು ಜಲಧಾರೆಗಳಲ್ಲಿ ವಿಭಿನ್ನನಾಗಿ ತೋರುವಂತೆ, ಆತ್ಮನೂ ಒಬ್ಬನೇ ಆದರೂ ವಿಭಿನ್ನನಾಗಿ ತೋರುವನು.

ಸತ್ಯಮಸ್ತೇಯಮಕ್ರೋಧೋ ಹ್ರೀಃ ಶೌಚಂ ಧೀರ್ಧೃತಿರ್ದಮಃ,
ಸಂಯತೇಂದ್ರಿಯತಾ ವಿದ್ಯಾ ಧರ್ಮಃ ಸರ್ವ ಉದಾಹೃತಃ.

(ಯಾಜ್ಞವಲ್ಕ್ಯ ಸ್ಮೃತಿ 3-66)

ಸತ್ಯ, ಅಸ್ತೇಯ, ಅಕ್ರೋಧ, ಶೌಚ, ಹಿತಾಹಿತವಿವೇಕ, ಅನಾಸಕ್ತಿ, ಆತ್ಮಜ್ಞಾನ. ಇವುಗಳ ಅನುಷ್ಠಾನ ಮಾಡಿದಲ್ಲಿ ಸರ್ವಧರ್ಮಗಳ ಅನುಷ್ಠಾನ ಮಾಡಿದಂತೆ.

ರ್ಷಿಯ ಮಗಳಾದ ಕಾತ್ಯಾಯನಿಯನ್ನು ವಿವಾಹವಾದರು. ರೂಪಲಾವಣ್ಯದ ಆಕೆ ಸದ್ಗುಣಗಳ ಸಾಕಾರ ಮೂರ್ತಿಯೆನಿಸಿದ್ದಳು. ಮುಗ್ಧ ಪ್ರೇಮದಿಂದ ಅನುರೂಪಳಾದ ಪತ್ನಿಯೆನಿಸಲು ತ್ರಿಕರಣ ಶುದ್ಧಿಯಿಂದ ಪಾತಿವ್ರತ್ಯ ಧರ್ಮವನ್ನು ಆಚರಿಸಿದ್ದಳು. ಯಾಜ್ಞವಲ್ಕ್ಯರು ಆದಿತ್ಯವ್ರತವಾರಂಭಿಸಿದರು. ತಮ್ಮ ಯೋಗನಿಷ್ಠೆಯಿಂದ ದಿನೇ ದಿನೇ ಧ್ಯಾನಾರೂಢರಾಗಿ ತೇಜಸ್ಸನ್ನು ಅಧಿಕವಾಗಿಸಿಕೊಂಡರು. ವ್ರತವನ್ನು ಕಠಿಣ ಆಚರಣೆಯಿಂದ ಇನ್ನಷ್ಟು ಪವಿತ್ರವಾಗಿಸಿದರು. ಇವರ ವ್ರತನಿಷ್ಠೆ ಹಾಗೂ ಕಠಿಣ ತಪೋನಿಷ್ಠೆಯನ್ನು ಕಂಡು ಸೂರ್ಯದೇವರಿಗೆ ಹೆಮ್ಮೆಯೆನಿಸಿದ್ದಲ್ಲದೆ, ತಮ್ಮ ತೇಜಸ್ಸನ್ನು ಕಿರಿದಾಗಿಸಿಕೊಂಡು ಕುದುರೆಯ ರೂಪದಲ್ಲಿ ಪ್ರತ್ಯಕ್ಷವಾದರು. ಯಾಜ್ಞವಲ್ಕ್ಯರ ಇಂಗಿತವನ್ನು ಅರಿತಿದ್ದ ಸೂರ್ಯದೇವರು ತಮ್ಮ ವೇದ ವಾಗ್ದೇವಿಯನ್ನು ಅವರ ಬಾಯಲ್ಲಿ ಪ್ರವೇಶಿಸುವಂತೆ ಮಾಡಿದರು. ಯಾಜ್ಞವಲ್ಕ್ಯರ ಮನದ ಅಂತಃಪಟಲದ ಮೇಲೆ ವೇದಮಂತ್ರಗಳು ಪ್ರಕಟವಾಗಿ ಕರ್ಣಗಳ ಸುತ್ತ ಓಂಕಾರದ ಝೇಂಕಾರ ಆರಂಭವಾದಾಗ ಮೈಮರೆತು ಪರವಶರಾದರು. ದಿವ್ಯಾನುಭವದಿಂದ ಚೇತರಿಸಿಕೊಂಡ ಅವರ ಜ್ಞಾನದ ಗಣಿಯಲ್ಲಿ ಚತುರ್ವೇದಗಳು ಮೂರ್ತಿವತ್ತಾಗಿದ್ದವು.

ಸೂರ್ಯದೇವರಿಂದ ಕುದುರೆಯರೂಪದಲ್ಲಿ ಅನುಗ್ರಹಿಸಲ್ಪಟ್ಟ ಕಾರಣವಾಗಿ "ಶುಕ್ಲಯಜುರ್ವೇದ" ಮತ್ತು "ವಾಜಸನೇಯ ಸಂಹಿತೆ" ಎಂದು ಖ್ಯಾತವಾಯಿತು. ಇದು ಹತ್ತೊಂಭತ್ತು ಉಪನಿಷತ್ತುಗಳಿಂದ ಕೂಡಿ ನಲವತ್ತು ಅಧ್ಯಾಯಗಳಲ್ಲಿ ಹರಡಿದೆ. ಮುನ್ನೂರ ಇಪ್ಪತ್ತೆಂಟು ಅನುವಾಕ್‌ಗಳನ್ನು ಹೊಂದಿ ಎರಡು ಸಾವಿರದ ಎಂಭತ್ತಾರು ಕಂಡಿಕೆಗಳನ್ನು ಪ್ರತಿಬಿಂಬಿಸುತ್ತವೆ. ತನ್ನದೇ ಆದ ವೈಶಿಷ್ಟ್ಯದಿಂದ ಕೂಡಿ ಯಾಜ್ಞವಲ್ಕ್ಯರ ಅಪಾರ ಜ್ಞಾನ ಇಲ್ಲಿ ಪ್ರತಿಬಿಂಬಿತವಾಗಿದೆ.

ಶಿಕ್ಷಣ ಪ್ರಸಾರದ ದೃಷ್ಟಿಯಿಂದ ಯಾಜ್ಞವಲ್ಕ್ಯರು ಸೂರ್ಯದೇವನು ವೇದವನ್ನು ಅನುಗ್ರಹಿಸಿದ ಸ್ಥಳದಲ್ಲಿಯೇ "ಬ್ರಹ್ಮಾಶ್ರಮ" ವೆಂಬ ಆಶ್ರಮವನ್ನು ಸ್ಥಾಪಿಸಿ ಕುಲಪತಿಗಳಾದರು. ಯಾಜ್ಞವಲ್ಕ್ಯರು ಪಡೆದಿದ್ದ ದಿವ್ಯಾನುಭವದಿಂದ ಪ್ರಸಿದ್ಧರಾಗಿದ್ದ ಕಾರಣ ಕಣಾದ, ಮಾಧ್ಯಂದಿನ, ವೈಧೇಯ, ಕಾಪಾಲ, ಪರಾಶರ – ಮೊದಲಾದ ಶಿಷ್ಯರು ಅಧ್ಯಯನ ಆರಂಭಿಸಿದರು. ಮಿತ್ರ ಋಷಿಯ ಪುತ್ರಿಯಾದ ಮೈತ್ರೇಯಿಯು ಬ್ರಹ್ಮಜ್ಞಾನವನ್ನು ಪಡೆಯಲು ಯಾಜ್ಞವಲ್ಕ್ಯರ ಅರ್ಧಾಂಗಿಯಾಗಲು ಬಯಸಿದಳು. ಕಾತ್ಯಾಯನಿ ಚಂದ್ರಕಾಂತ, ಮಹಾಮೇಘ, ವಿಜಯ ಎಂಬ ಮೂರು ಮಕ್ಕಳಿಂದ ಅನುಗ್ರಹೀತಳಾಗಿದ್ದ ಕಾರಣ ಅವುಗಳ ಆರೈಕೆ ಮಾಡಬೇಕಾಗಿತ್ತು. ತನ್ನ ಪತಿಯ ಆಧ್ಯಾತ್ಮಿಕ ಅನ್ವೇಷಣೆಯಲ್ಲಿ ಪೂರಕವಾಗಲೆಂಬ ಭಾವನೆಯಿಂದ ಮೈತ್ರೇಯಿ ಯಾಜ್ಞವಲ್ಕ್ಯರನ್ನು ವರಿಸಲು ಅನುಮತಿಸಿದಳು.

ಒಮ್ಮೆ ವಿದೇಹ ರಾಜ್ಯದ ರಾಜರ್ಷಿ ಜನಕರಾಜ ನಿಂದ "ಬಹುದಕ್ಷಿಣಾ" ಎಂಬ ಯಜ್ಞಕ್ಕೆ ಆಹ್ವಾನ ಬಂದಿತು. ವಿದ್ವತ್ ಸಭೆಗಳನ್ನು ನಡೆಸಿ ಋಷಿಮುನಿಗಳನ್ನು ಗೌರವಿಸುತ್ತಿದ್ದ ಜನಕರಾಜನು ಯಜ್ಞನಿಮಿತ್ತವಾಗಿ ಸರ್ವಜ್ಞಪಟ್ಟಾಭಿಷೇಕವನ್ನು ಬ್ರಹ್ಮಜ್ಞಾನಿಗಳಿಗೆ ಏರ್ಪಡಿಸಿದ್ದನು. ರಾಜನ ಆಹ್ವಾನದಂತೆ ಈ ಸಭೆಗೆ ಬ್ರಹ್ಮವಾದಿಗಳು ಬ್ರಹ್ಮಜ್ಞಾನಿಗಳು ಆಗಮಿಸಿ ಸನಾತನ ಧರ್ಮವನ್ನು ಸ್ಪಂದಿಸಿದ್ದರು. ಜನಕ ಮಹಾರಾಜನು 'ಪೂಜ್ಯರೇ, ನಿಮ್ಮಲ್ಲಿ ಯಾರಾದರೂ ಬ್ರಹ್ಮಜ್ಞಾನಿಗಳಾಗಿದ್ದಲ್ಲಿ ಅವರು ಸುವರ್ಣಪದಕಗಳಿಂದ ಕೂಡಿರುವ ದಿವ್ಯವಾದ ಒಂದು ಸಹಸ್ರ ಗೋವುಗಳನ್ನು ಅಟ್ಟಿಕೊಂಡು ಹೋಗಬಹುದು' ಎಂದು ಬಿನ್ನವಿಸಿ ಮುಂದೆ ನಡೆಯಲಿರುವ ವಾದವಿವಾದಗಳಿಗೆ ಪೀಠಿಕೆ ಹಾಕಿದನು. ಮೌನ ಗಾಂಭೀರ್ಯದಿಂದ ಶೋಭಿತವಾದ ಸಭೆಯಲ್ಲಿ ಕ್ಷಣಕಾಲಾನಂತರ ಯಾಜ್ಞವಲ್ಕ್ಯರು ತಮ್ಮ ಎತ್ತರದ ಧ್ವನಿಯಲ್ಲಿ ಶಿಷ್ಯನಿಗೆ ಗೋವುಗಳನ್ನು ಆಶ್ರಮಕ್ಕೆ ತೆಗೆದುಕೊಂಡು ಹೋಗಲು ತಿಳಿಸಿದರು. ತಕ್ಷಣವೇ ಕೆಲವು ಮದೋನ್ಮತ್ತರಾದ ಋಷಿಮುನಿಗಳು ಪ್ರಶ್ನೆಗಳ ಸುರಿಮಳೆಯನ್ನೇ ಧಾರಾಕಾರವಾಗಿ ಕರೆದರು. ವಿಚಲಿತರಾಗದೆ ತಮ್ಮ ಸಿಂಹ ಕಂಠದ, ಧೀಶಕ್ತಿಯ ವಾಗ್ವೈಖರಿಯಿಂದ ಯಾಜ್ಞವಲ್ಕ್ಯರು ಸಮರ್ಪಕವಾಗಿ ಉತ್ತರಿಸಿ ಅವರನ್ನು ತಲೆ ತಗ್ಗಿಸುವಂತೆ ಮಾಡಿದರು. ರಾಜ ಪುರೋಹಿತ ಅಶ್ವಲರು ಮತ್ತು ಬ್ರಹ್ಮವಾದಿನಿ ಗಾರ್ಗಿ ಬ್ರಹ್ಮಜ್ಞಾನದ ಬಗ್ಗೆ ದೀರ್ಘವಾಗಿ ಪ್ರಶ್ನಿಸಿದರು. ಯಾಜ್ಞವಲ್ಕ್ಯರು ಅವರನ್ನು ನಿರುತ್ತರಗೊಳಿಸಿದರು. ಅಂತಿಮವಾಗಿ ಗಾರ್ಗಿಯು ಯಾಜ್ಞವಲ್ಕ್ಯರನ್ನು ಬ್ರಹ್ಮಜ್ಞಾನಿಗಳು ಎಂದು ಘೋಷಿಸಿ, ಅವರಿಗೆ

( 22ನೇ ಪುಟ ನೋಡಿ )

## ಯುವವಾಣಿ

# ಶಿಕ್ಷಣ ಚಿಂತನ

ಶಿಕ್ಷಣವೆಂಬುದು ಕೇವಲ ಅಕ್ಷರ ತಿದ್ದುವುದಲ್ಲ ಅಥವಾ ಜ್ಞಾನದ ಬೋಧನೆಯಲ್ಲ. ಅದು ಬುದ್ಧಿಯ ವಿಕಸನ. ಅದೊಂದು ಕೊನೆಯಿರದ ನಿರಂತರ ಕ್ರಿಯೆ. ಶಿಕ್ಷಣ ವೃತ್ತಿ ಅತ್ಯಂತ ಪ್ರಾಚೀನವೂ ಮತ್ತು ಉದಾತ್ತವೂ ಆದುದು. ವಿದ್ಯಾರ್ಥಿಗಳಿಗೆ ಜ್ಞಾನವನ್ನು ಬೋಧಿಸುವುದರ ಜೊತೆಗೆ ಶಿಸ್ತು, ಸಂಸ್ಕೃತಿ, ಜೀವನ ಮೌಲ್ಯಗಳನ್ನು ತಿಳಿಸಿಕೊಡುವುದರಲ್ಲಿಯೂ ಸಹ ಈ ವೃತ್ತಿಯು ಅವಕಾಶವನ್ನು ಒದಗಿಸುತ್ತದೆ. ಸಾರ್ಥಕವಾದ ಮತ್ತು ಅರ್ಥಪೂರ್ಣವಾದ ಬದುಕನ್ನು ನಡೆಸಲು ವ್ಯಕ್ತಿಯನ್ನು ಮಾನಸಿಕವಾಗಿ, ದೈಹಿಕವಾಗಿ ಸಿದ್ಧಪಡಿಸುವುದು ನಿಜವಾದ 'ಶಿಕ್ಷಣ' ವೆಂದು ಹೇಳಬಹುದು.

ಇತ್ತೀಚಿನ ದಿನಗಳಲ್ಲಿ ವಿದ್ಯಾರ್ಥಿಗಳು ಹಾಗೂ ಸಿಬ್ಬಂದಿ ವರ್ಗದವರು ಎದುರಿಸುತ್ತಿರುವ ನಾನಾರೀತಿಯ ಸಮಸ್ಯೆಗಳನ್ನು ಕೇಳುತ್ತಿರುತ್ತೇವೆ. ಒಂದಲ್ಲ ಒಂದು ಕಾರಣಕ್ಕಾಗಿ ವಿದ್ಯಾರ್ಥಿ ಮುಷ್ಕರಗಳು ಅವರ ಬೇಡಿಕೆಗಳು, ಅಸಮಾಧಾನ, ಅತೃಪ್ತಿ, ಹಿಂಸಾತ್ಮಕ ಚಳುವಳಿ–ನೊದಲಾದ ಸಮಾಚಾರಗಳು ಬಿತ್ತರವಾಗುತ್ತಿರುತ್ತವೆ. ನಾನಾ ಕ್ಷೇತ್ರಗಳಲ್ಲಿ ದುಡಿಯುವವರು ದಿನಬೆಳಗಾದರೆ ತಮ್ಮ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ನಡೆಸುವ ಮುಷ್ಕರಗಳು, ಹಿಂಸಾತ್ಮಕ ಚಳುವಳಿಗಳು ಇಂದು ದೇಶದಾದ್ಯಂತ ಸರ್ವೇಸಾಮಾನ್ಯವಾಗಿದೆ. ಇದರಿಂದ ನಾವು ನಿರಾಶೆ ಪಡಬೇಕಾದ ಅಗತ್ಯವಿಲ್ಲ. ಇದು ವಿಶ್ವದ ಸಮಸ್ಯೆ. ನಾವು ಇದನ್ನು ಧೈರ್ಯವಾಗಿ ಎದುರಿಸಬೇಕು. ಪ್ರಧಾನಿ ಚರ್ಚಿಲ್ಲರು ಬ್ರಿಟಿಷ್ ಚರಿತ್ರೆಯ ಅತ್ಯಂತ ಅತಂಕಕಾರಿ ಸಮಯದಲ್ಲಿ ಎಂತಹ ಕಷ್ಟಸಾಧ್ಯವಾದ ಪರಿಸ್ಥಿತಿಯನ್ನೂ ದೃಢ ಮನಸ್ಸಿನಿಂದ ಎದುರಿಸುವ ಎದೆಗಾರಿಕೆ ಇರಬೇಕೆಂದು ಹೇಳಿದ್ದಾರೆ. ಇಂತಹ ಹಲವಾರು ಸಮಸ್ಯೆಗಳನ್ನು ಸಮೂಹಿಕವಾಗಿ ನಿವಾರಿಸಿ ಸಮತೋಲವನ್ನು ಸ್ಥಾಪಿಸಬೇಕಾದ ಅಗತ್ಯ ಈಗಿದೆ. ಎಲ್ಲ ಮಟ್ಟದಲ್ಲೂ ವಿದ್ಯಾಭ್ಯಾಸ ನೀಡುವುದರ ಮೂಲಕ ಇಂತಹ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವೆಂದು ಹೇಳಬಹುದು.

1930 ರಲ್ಲಿ ರಷ್ಯಾವನ್ನು ನೋಡಿ ಬಂದ ರಬೀಂದ್ರನಾಥ ಠಾಕೂರರು "ನಮ್ಮ ಸಮಸ್ಯೆಗಳಿಗೆಲ್ಲ ರಾಜಮಾರ್ಗವೆಂದರೆ ವಿದ್ಯಾಭ್ಯಾಸ" ಎಂದು ಹೇಳಿದರು. 'ಇಡೀ ರಷ್ಯಾದಲ್ಲಿ ವಿದ್ಯೆಯು ಸಾಧಿಸಿರುವ ಪ್ರಗತಿ ವಿಶಿಷ್ಟವಾದುದು. ಅದು ಸಾಮಾಜಿಕ ಮತ್ತು ಆರ್ಥಿಕ ಅಸಿಷ್ಟವನ್ನು ನಿವಾರಿಸಿದೆ' ಎಂದು ಹೇಳಿದರು. ಅಕಾಡಮಿ ಆಫ್ ಎಜುಕೇಷನ್‌ನ ಅಧ್ಯಕ್ಷರು 1930 ರಲ್ಲಿ, ಸೋವಿಯಟ್ ರಷ್ಯಾದ ಶಾಲೆಗಳಲ್ಲಿ ಹಿರಿಯರಿಂದ ಕಿರಿಯ ಜನಾಂಗಕ್ಕೆ ಜ್ಞಾನಪ್ರಸಾರವಾಗುವುದರ ಜೊತೆಯಲ್ಲಿ ಸಾಮೂಹಿಕ ಅಧ್ಯಾಪನ, ಉದ್ದೀಪನ ಮತ್ತು ಶಿಕ್ಷಣ–ಇವುಗಳ ಐಕ್ಯತೆಯನ್ನು ಶಿಸ್ತಿನಿಂದ ಪಾಲಿಸುತ್ತಾರೆ ಎಂದು ತಿಳಿಸಿದರು. ಈ ಮೂರು ಅಂಗಗಳು ಜೊತೆ ಜೊತೆಯಲ್ಲಿ ಕಾರ್ಯನಿರ್ವಹಿಸಿ ಸಾಮರಸ್ಯದಿಂದೊಡಗೂಡಿದ ವ್ಯಕ್ತಿತ್ವವನ್ನು ರೂಪಿಸುತ್ತಿದೆ ಎಂದು ಹೇಳಿದರು. ಸ್ವೀಡನ್ ಮತ್ತು ಸ್ವಿಟ್ಸರ್‌ಲೆಂಡ್ ದೇಶಗಳಲ್ಲಿರುವಂತೆ ಯಾವ ದೇಶದಲ್ಲಿ ಸಾಕ್ಷರತೆಯು ಹೆಚ್ಚಿನ ಮಟ್ಟದಲ್ಲಿದೆಯೋ ಆ ದೇಶದಲ್ಲಿ ಸಾಮಾಜಿಕ ಮತ್ತು ಆರ್ಥಿಕ ಪಿಡುಗುಗಳನ್ನು ನಿವಾರಿಸಬಹುದು. ಅತಿ ಹೆಚ್ಚಿನ ನಿರಕ್ಷರತೆಯು ದೇಶಕ್ಕೆ ಒಂದು ಶಾಪವಿದ್ದಂತೆ. ಬಡತನವನ್ನು ಸಹಿಸಬಹುದು. ಆದರೆ ನಿರಕ್ಷರತೆ ಮತ್ತು ಅಜ್ಞಾನ ಸಹಿಸಲಾಗದು. ಇವನ್ನು ತೊಡೆದುಹಾಕಲು ಎಲ್ಲ ರೀತಿಯಿಂದಲೂ ಹೋರಾಡಬೇಕು. ರಾಜ್ಯದ ಪ್ರತಿಯೊಬ್ಬ ಪುರುಷ ಮತ್ತು ಸ್ತ್ರೀಯರನ್ನು ವಿದ್ಯಾವಂತರನ್ನಾಗಿ ಮಾಡುವುದು ಆ ರಾಜ್ಯದ ಪ್ರಥಮ ಕರ್ತವ್ಯ. "ದುರಂತವನ್ನು ತಡೆಗಟ್ಟಲು ವಿಚಾರಗಳ ಐಕ್ಯತೆ ಅಗತ್ಯ. ಇದು ವಿದ್ಯೆಯ ಮೂಲಕ ಮಾತ್ರ ಸಾಧ್ಯ"-ಎಂದು ಹಕ್ಸ್ಲೆ ಅಭಿಪ್ರಾಯ ಪಡುತ್ತಾನೆ. ಬೌದ್ಧಿಕ ಸಹಕಾರ ಮತ್ತು ವಿಚಾರ ವಿನಿಮಯ ಇವು ಸಾಮಾಜಿಕ, ಆರ್ಥಿಕ ಹಾಗೂ ರಾಜಕೀಯ ರಂಗಗಳಲ್ಲಿ ಉಂಟಾಗುವ ಸಂಘರ್ಷವನ್ನು ಕಡಿಮೆ ಮಾಡುವಲ್ಲಿ ಹೊಸ ಆಯಾಮವನ್ನು ತೆರೆಯುತ್ತವೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ.

"ಇಂದು ಶಿಕ್ಷಣ ವೃತ್ತಿಯ ಮುಂದಿರುವ ಆದ್ಯಕರ್ತವ್ಯವೆಂದರೆ ಮಾನವೀಯ ಕ್ರಾಂತಿಯ ಬಗೆಗಿನ ಎಲ್ಲ ವಿದ್ಯಮಾನಗಳನ್ನು ಅಭ್ಯಸಿಸುವುದು ಮತ್ತು ಅರ್ಥಮಾಡಿಕೊಳ್ಳುವುದು. ಇದು ಅತ್ಯಾವಶ್ಯಕವಾದುದು. ಇದರಿಂದ ಬೆಳೆಯುತ್ತಿರುವ ಮನಸ್ಸಿಗೆ ಭೌತವ್ಯದ ದೃಷ್ಟಿಯ ಬಗೆಗೆ ಹೊಸ ಬೆಳಕು ಚೆಲ್ಲಿದಂತೆ ಆಗುತ್ತದೆ" ಎಂದು ಹಕ್ಸ್ಲೆ ಹೇಳುತ್ತಾನೆ.

ನಾವು ಇಂದು ಸಂದಿಗ್ಧ ಪರಿಸ್ಥಿತಿಯಲ್ಲಿ ಬದುಕುತ್ತಿದ್ದೇವೆ. ಮನುಷ್ಯ ಸ್ವಭಾವ, ಸಂಸ್ಕೃತಿ, ಜನಸಂಖ್ಯೆ–ಈ ಮೂರರ ಏಕಾಗ್ರತೆಯಲ್ಲಿರುವ ಸಂದಿಗ್ಧ ಪರಿಸ್ಥಿತಿ ಒಂದು ಕಡೆ, ಮತ್ತೊಂದು ಕಡೆಯಲ್ಲಿ, ವಿಜ್ಞಾನ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ದಿಕ್ಕು ತೋಚದಂತಾಗಿರುವ ಹಲವಾರು ಶಾಖೆಗಳ ಏಕಾಗ್ರ ಮುಖತೆಯಿಂದಾಗಿರುವ ಸಂದಿಗ್ಧ ಪರಿಸ್ಥಿತಿ. ಇವನ್ನು ನಿವಾರಿಸಬೇಕಾದರೆ ನಾವು ತಾತ್ವಿಕ ದೃಷ್ಟಿಗೆ ಮೊರೆಹೋಗಬೇಕೆಂದು ಜೆ. ಬಿ. ಎಸ್. ಹಾಲ್ಡೇನ್ ಎಚ್ಚರಿಸಿದ್ದಾನೆ.

ವಿಶ್ವವಿದ್ಯಾಲಯದ ಹೆಚ್ಚಿನ ಶಿಕ್ಷಣ ಸೌಲಭ್ಯಗಳನ್ನು ಪಡೆದ ಬುದ್ಧಿಜೀವಿಗಳು, ಸಮಾಜದ ಪ್ರತಿಷ್ಠಿತ ವ್ಯಕ್ತಿಗಳು ಸಮಾ

**ಡಾ || ಎನ್. ವಿ. ವಿಮಲ**

ಜಕ್ಕೆ ಪ್ರತಿಯಾಗಿ ಏನನ್ನು ಕೊಡಬಲ್ಲರು ? ಅವರು ಯಾವ ಕರ್ತವ್ಯವನ್ನು ನಿರ್ವಹಿಸ ಬಲ್ಲರು ?

ಸಮಾಜದಲ್ಲಿ ಬುದ್ಧಿಜೀವಿಗಳ ಪಾತ್ರ ಬಹಳ ಮಹತ್ವದ್ದು. ವಿಶೇಷ ಶಿಕ್ಷಣ ಪಡೆದ ಅವರು ಕಿರಿಯ ಜನಾಂಗಕ್ಕೆ ವಿಶೇಷ ವಿಷಯವನ್ನು ಬೋಧಿಸುವುದು ಮಾತ್ರವಲ್ಲದೆ ಸಮಾಜಕ್ಕೆ ಮತ್ತು ಅಷ್ಟು ಅದೃಷ್ಟವಂತರಲ್ಲದ ನಮ್ಮ ಸಹಜೀವಿಗಳಿಗೆ ಕಿಂಚಿತ್ತಾದರೂ ಸೇವೆ ಸಲ್ಲಿಸಬೇಕಾದುದು ಅವರ ಕರ್ತವ್ಯ. ನೂರೈವತ್ತು ವರ್ಷಗಳ ಹಿಂದೆ ಸ್ವೀಡನ್‌ನಲ್ಲಿ ಶಿಕ್ಷಣ ಪ್ರಸಾರ ಮಾಡಿದಂತೆ ಭಾರತದಲ್ಲಿಯೂ ಮಾಡಬಹುದು. ಉನ್ನತ ಶಿಕ್ಷಣ ಪಡೆದ ಬುದ್ಧಿವಂತ ಜನಾಂಗವು ಒಂದು ಕೇಂದ್ರವನ್ನಾಗಿ ಮಾಡಿಕೊಂಡು ಆ ಮೂಲಕ ಶಿಕ್ಷಣ ಸೌಲಭ್ಯವನ್ನು ಅಷ್ಟಾಗಿ ಪಡೆಯದಿರುವ ನಮ್ಮ ಸಹೋದರ, ಸಹೋದರಿಯರಿಗೆ ಮನವಿ, ಪ್ರಸಾರ, ಭಾಷಣ ಮತ್ತು ಬರವಣಿಗೆಗಳ ಮುಖಾಂತರ ಶಿಕ್ಷಣ ಹಾಗೂ ಜ್ಞಾನಪ್ರಸಾರ ಮಾಡಬಹುದು. ಈ ರೀತಿಯ ಶಿಸ್ತಿನ ಬೌದ್ಧಿಕ ಕ್ರಾಂತಿಯನ್ನು ಕೈಗೊಂಡರೆ ನಮ್ಮ ದೇಶವೂ ಪ್ರಪಂಚದ ಅಭಿವೃದ್ಧಿ ಹೊಂದಿದ ದೇಶಗಳ ಸಾಲಿನಲ್ಲಿ ನಿಲ್ಲುವ ಸಾಮರ್ಥ್ಯವನ್ನು ಪಡೆಯಬಲ್ಲುದು.

'ಧರ್ಮ' ಜೀವನದ ಒಂದು ಮಾರ್ಗ. ಧರ್ಮ ಮತ್ತು ವಿಜ್ಞಾನದ ಮಧ್ಯೆ ಯಾವ ಭಿನ್ನಾಭಿಪ್ರಾಯವೂ ಇಲ್ಲ. ಲಾರ್ಡ್ ರುಥರ್‌ಫೋರ್ಡ್ "ಧರ್ಮವು ಆತ್ಮಕ್ಕೆ ಸಂಬಂಧಪಟ್ಟಿದ್ದರೆ, ವಿಜ್ಞಾನವು ದೇಹ ಮತ್ತು ಮನಸ್ಸಿಗೆ ಸಂಬಂಧಪಟ್ಟಿದೆ" ಎಂದು ಹೇಳಿದ್ದಾನೆ. ಎಲ್ಲೆಡೆಯೂ ವ್ಯಾಪಕವಾರುವ ದೈವತ್ವದಲ್ಲಿ ಭರವಸೆ ಮತ್ತು ದೈವಿಕ ವಿಕಾಸದಲ್ಲಿ ನಂಬಿಕೆ – ಇವು ಎಂದಿಗೂ ವಿರೋಧವಾಗುವುದಿಲ್ಲವೆಂದು ನನ್ನ ಅನ್ನಿಸಿಕೆ.

ಕಡೆಯದಾಗಿ, ಜ್ಞಾನದ ಮಹತ್ವವನ್ನು ಎತ್ತಿಹಿಡಿಯುವ ಭಗವದ್ಗೀತೆಯ ಈ ಶ್ಲೋಕ ಉಲ್ಲೇಖನಾರ್ಹವಾದುದು:

ನ ಹಿ ಜ್ಞಾನೇನ ಸದೃಶಂ
ಪವಿತ್ರಮಿಹ ವಿದ್ಯತೇ ।
ತತ್ಸ್ವಯಂ ಯೋಗ ಸಂಸಿದ್ಧಃ
ಕಾಲೇನಾತ್ಮನಿ ವಿಂದತಿ ॥

ಶ್ರದ್ಧಾವಾನ್ ಲಭತೇ ಜ್ಞಾನಂ
ತತ್ಪರಃ ಸಂಯತೇಂದ್ರಿಯಃ ।
ಜ್ಞಾನಂ ಲಬ್ಧ್ವಾ ಪರಾಂ
ಶಾಂತಿಮಚಿರೇಣಾಧಿಗಚ್ಛತಿ ॥

( 5· 38–39 )

---

ಕೌಸಲ್ಯಾ ಸುಪ್ರಜಾರಾಮ
ಪೂರ್ವಾ ಸಂಧ್ಯಾ ಪ್ರವರ್ತತೇ
ಉತ್ತಿಷ್ಠ ನರಶಾರ್ದೂಲ
ಕರ್ತವ್ಯಂ ದೈವಮಾಹ್ನಿಕಮ್ ॥
ಉತ್ತಿಷ್ಠೋತ್ತಿಷ್ಠ ಗೋವಿಂದ
ಉತ್ತಿಷ್ಠ ಗರುಡಧ್ವಜ
ಉತ್ತಿಷ್ಠ ಕಮಲಾಕಾಂತ
ತ್ರೈಲೋಕ್ಯಂ ಮಂಗಳಂ ಕುರು ॥

ಈ ಮೇಲಿನ ಸ್ತೋತ್ರದ ಹಿನ್ನೆಲೆ ಹೀಗಿದೆ– ವಿಶ್ವಾಮಿತ್ರ ಋಷಿಯು ರಾಮಲಕ್ಷ್ಮಣರನ್ನು ಮುಂಜಾನೆ ಎಬ್ಬಿಸುತ್ತಾರೆ. ಅನಂತರ 'ಹೇರಾಮ ಚಂದ್ರ! ಪಶುಪಕ್ಷಿ ಪ್ರಾಣಿಗಳೆಲ್ಲ ಜಾಗೃತವಾಗಿವೆ. ಮೂರು ಲೋಕಕ್ಕೂ ಮಂಗಳ ಬಯಸುವ ನೀನೇ ಮಲಗಿದ್ದರೆ ಹೇಗೆ? ......... ಕರ್ತವ್ಯವೇ–ದೇವ ಕಾರ್ಯ ವಲ್ಲವೇ!......ಎದ್ದೇಳು ಕೌಸಲ್ಯಾ ಸುಪುತ್ರನೇ!' ಎನ್ನುತ್ತಾರೆ. ಇಲ್ಲಿ ನಮಗೆ ಒಂದು ವಿಚಾರ ಸ್ಪಷ್ಟವಾಯಿತು. ಕರ್ತವ್ಯ ಅವಶ್ಯಕ, ಮಾನವನಾಗಲಿ, ದೇವಮಾನವನಾಗಲಿ ಅಲ್ಲವೇ!

ಕರ್ತವ್ಯ ಅಂದರೇನು?.... .... ಯಾವುದು ನಮ್ಮನ್ನು ಲೋಕಹಿತ–ಸ್ವಹಿತ ಮಾಡುವುದಕ್ಕೆ ಪ್ರೇರೇಪಿಸುವುದೋ ಅದೇ ಕರ್ತವ್ಯ, ಪ್ರತಿಯೊಂದು ಕರ್ತವ್ಯವೂ ಪವಿತ್ರವೆ. ಕರ್ತವ್ಯ ಪರಾಯಣತೆಯೇ ಅತಿ ಶ್ರೇಷ್ಠವಾದ ಭಗವಂತನ ಪೂಜೆ. ಇದೇ ದೃಷ್ಟಿಯನ್ನು 'ಶಾಸ್ತ್ರ'ವು ಹೀಗೆ ಹೇಳುತ್ತದೆ–

ಕ್ರಿಯಾಚಾರ ಜ್ಞಾನಾಚಾರ
ಭಾವಾಚಾರಸ್ತಥೈವಚ !
ಸತ್ಯಾಚಾರ ನಿತ್ಯಾಚಾರ
ಧರ್ಮಾಚಾರ ವರಾನನೇ–
ಸರ್ವಾಚಾರ ಸಂಪನ್ನೇನ
ಸದಾ ಸನ್ನಿಹಿತಃ ಶಿವಃ ॥

ನಮ್ಮ ಕರ್ತವ್ಯದಲ್ಲಿ ಆತ್ಮಶ್ರದ್ಧೆ ಅವಶ್ಯಕ. ಮಹನೀಯರೊಬ್ಬರು 'ನೂರರಲ್ಲಿ ಒಂದರಷ್ಟು ಪ್ರತಿಭೆ, ತೊಂಬತ್ತೊಂಬತ್ತರಷ್ಟು ಪರಿಶ್ರಮವಿರುವುದೇ ಯಶೋವಂತನ ಗುಣ' ಎಂಬುದಾಗಿ ತಿಳಿಸಿ ಕೊಟ್ಟಿದ್ದಾರೆ. ಆದುದರಿಂದ ತಮ್ಮ ಪಾತ್ರವನ್ನು ಚೆನ್ನಾಗಿ ನಿರ್ವಹಿಸಿದರೆ ಸರ್ವಗೌರವವೂ ನಮ್ಮದಾಗುತ್ತದೆ.

ಕರ್ತವ್ಯವೂ ಪರಿಶುದ್ಧ ಶೀಲ(ನಡತೆ) ದಿಂದ ಪ್ರಕಾಶಿಸಲ್ಪಡುವುದು. ಇಲ್ಲಿ ಮಹರ್ಷಿ ವೇದವ್ಯಾಸರ ಶ್ಲೋಕವೊಂದನ್ನು ಉದ್ಧೃತ ಮಾಡಬಹುದು–

ಶೀಲಂ ಪ್ರಧಾನಂ ಪುರುಷೇ
.....................

# ಕರ್ತವ್ಯಂ ದೈವ ಮಾಹ್ನಿಕಂ

ನ ತಸ್ಯ ಜೀವಿತೇನಾರ್ಥಃ
ನ ಧನೇನ ನ ಬಂಧುಭಿಃ ॥

ಮನುಷ್ಯನಲ್ಲಿ ನಡತೆಯೇ ಪ್ರಧಾನವಾದುದು. ಕೆಟ್ಟರೆ ಅವನ ಬಳಿ ಎಷ್ಟು ಹಣವಿದ್ದರೇನು? ಅವನಿಗೆ ಎಷ್ಟು ಜನ ಬಂಧು ವರ್ಗದವರಿದ್ದರೇನು? ಅವನು ಎಷ್ಟು ದೀರ್ಘಕಾಲ ಬದುಕಿದರೇನು? ಎಲ್ಲವೂ ವ್ಯರ್ಥ. ಈ ಕಾರಣದಿಂದ 'ವೃತ್ತಂ ಯತ್ನೇನ ಸಂರಕ್ಷೇತ್'ನಾವು ನಮ್ಮ ನಡತೆಯನ್ನು ಶ್ರಮ ವಹಿಸಿ ಕಾಪಾಡಿಕೊಳ್ಳಬೇಕು. ಜಗತ್ತಿನಲ್ಲಿ ಯಾರಲ್ಲಿ ಹಣವಿಲ್ಲವೋ ಆತ ದರಿದ್ರ ನೆನಿಸಿ ಕೊಳ್ಳುವುದಿಲ್ಲ, ತಿಳಿದವರ ದೃಷ್ಟಿಯಿಂದ ನಡತೆಗೆಟ್ಟವನೇ ದರಿದ್ರ. ಈ ದರಿದ್ರತೆಗೆ ಕಾರಣ 'ಹೃದಯ ದೌರ್ಬಲ್ಯ'. ಅಂದರೆ ಒಳ್ಳೊಳ್ಳೆ ಗುಣಗಳ ಅಭಾವ;

ನಮ್ಮ ನಡತೆ (ಶೀಲ) ಹೇಗಿರಬೇಕು? ಪೂಜ್ಯ ತೋಂಟದ ಸಿದ್ಧಲಿಂಗರ ಅಮೃತವಾಣಿ ಹೀಗಿದೆ–

## ಶ್ರೀ ಮತ್ತೀಗೆರೆ ಅನಂತು

ಸತ್ಯದಲಿ ನಡೆವುದು ಶೀಲ
ಸತ್ಯದಲಿ ನುಡಿವುದು ಶೀಲ
ಸಜ್ಜನ ಸದಾಚಾರದಲ್ಲಿ ವರ್ತಿಸಿ
ಸತ್ಯವನರಿವುದೇ ಶೀಲ ಕಾಣಿರೋ
ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೇ!

'ಆಚಾರಃ ಪ್ರಥಮೋ ಧರ್ಮಃ' ಅಂದರೆ ಆಚಾರವೇ ಪ್ರಥಮ ಧರ್ಮ, ಎಂಬುದಾಗಿ ಶ್ರುತಿ ಹೇಳುತ್ತದೆ. ಆದುದರಿಂದ ಧರ್ಮದ ಆಸರೆಯಿರುವ ಕ್ರಿಯೆಗಳೇ ನಮ್ಮ ಸಮಾಜವನ್ನು, ದೇಶವನ್ನು, ಕಾಪಾಡಬಲ್ಲವು. ಎಲ್ಲವನ್ನು 'ದೇವರೇ ನಡೆಸುತ್ತಾನೆ' ಎಂದು ಕೈಕಟ್ಟಿ ಕುಳಿತರೆ ಪ್ರಯೋಜನವಾಗಲಾರದು. ಗೀತಾಚಾರ್ಯ ಹೇಳುತ್ತಾನೆ–ನಾವು ಇರುವುದೇ, ಕರ್ಮಣ್ಯೇವ ಅಧಿಕಾರಸ್ತೇ–ಗೆ ಅಲ್ಲವೇ! ಇದೇ ಅಭಿಪ್ರಾಯವನ್ನು ವಚನ ಶಾಸ್ತ್ರದಲ್ಲೂ ಗಮನಿಸ ಬಹುದು.

ಪುರುಷಂ ದೈವಮೆ ಶರಣೆಂದಿರಲಾಗದು
ತನಗೆ ತಾನೇ ಮಾಡದು ದೈವಂ
ಪುರುಷಾರ್ಥಂ ಗೈಯುತ್ತಿರೆ
ಪರಮಾರ್ಥಂ, ದೈವಂ ಕೃತಾರ್ಥಂ
ಮಾಳ್ಪಂ ॥

ಕರ್ತವ್ಯ ಮಧುರವಾಗಿ, ಹಿತವಾಗಿ ನಡೆಯಬೇಕಾದರೆ ಪ್ರೀತಿ ವಾತ್ಸಲ್ಯ ಅವಶ್ಯಕ. ಆಗ ಕಾಯಕ–ಕೈಲಾಸವಾಗುವುದು. ಇಲ್ಲಿ ಸ್ವಾಮಿ ವಿವೇಕಾನಂದರು ಹೇಳಿರುವಂತೆ "ಕರ್ತವ್ಯವೆಂದಿಗೂ ಸುಗಮವಾಗುವುದಿಲ್ಲ, ಪ್ರೀತಿಯ ಕೀಲೆಣ್ಣೆಯು ಬಿದ್ದಾಗಲೇ ಅದು ಸರಾಗವಾಗಿ ಸಾಗುತ್ತದೆ, ಇಲ್ಲದಿದ್ದರೆ ಘರ್ಷಣೆ ತಪ್ಪಿದ್ದಿಲ್ಲ". ಇದಕ್ಕೆ ಪೂರಕವಾಗಿ ನಾವು ಒಳ್ಳೊಳ್ಳೆ ಅಭ್ಯಾಸಗಳನ್ನು ಸಂಸ್ಕೃತಾಭಿರುಚಿಯನ್ನು ಬೆಳೆಸಿಕೊಳ್ಳಬೇಕು.

ನಮ್ಮ ಕರ್ತವ್ಯಕ್ಕೆ ಬೆಲೆ ಬರಬೇಕಾದರೆ ನಮ್ಮ ಕಾಯಕದಿಂದಲೇ; ಮತ್ತೊಬ್ಬರು ಮಾಡಿದ ಅಥವಾ ಗಳಿಸಿದ ಕೀರ್ತಿಯಿಂದ ನಮಗೆ ಗೌರವ ದಕ್ಕಲಾರದು. ಸುಭಾಷಿತವೊಂದು ಇದೇ ದೃಷ್ಟಿಯನ್ನು ಸಾರುತ್ತದೆ–

ಗುಣಾಃ ಸರ್ವತ್ರ ಪೂಜ್ಯಂತೇ
ಪಿತೃ ವಂಶೋ ನಿರರ್ಥಕಃ ।
ವಾಸುದೇವಂ ನಮಸ್ಯಂತಿ
ವಸುದೇವಂ ನ ಮಾನವಾಃ ॥

ಒಬ್ಬನ ಗುಣಶೀಲಗಳನ್ನು ಒರೆ ಹಚ್ಚಬೇಕಾದರೆ ಅವನು ಯಾವುದಕ್ಕೋಸ್ಕರ ಹಂಬಲಿಸುತ್ತಾನೆ, ಅವನಿಗೆ ಯಾವುದು ಪ್ರಿಯ, ಎಂಬುದನ್ನು ತಿಳಿದು ಕೊಂಡರೆ ಸಾಕು. ಪಕ್ವವಾದ ನಡತೆಯೇ ನಾಗರಿಕತೆಯ ಹೆಗ್ಗುರುತು. ನಡೆ–ನುಡಿ ಆಚಾರ–ವ್ಯವಹಾರ ಎಲ್ಲದರ ಮೇಲೂ, ಒಳ್ಳೆಯ ಅಭ್ಯಾಸ ತನ್ನ ಮುದ್ರೆಯನ್ನು ಒತ್ತುತ್ತದೆ. ಹಾಕುವಬಟ್ಟೆ, ಆಡುವ ಮಾತು, ಮಾಡುವ ಕೆಲಸ, ಯುಕ್ತತೆಯ ಪರಿಜ್ಞಾನ ಅವಶ್ಯಕ.

ನಮ್ಮ ಅಭಿರುಚಿ ನಮ್ಮ ಕರ್ತವ್ಯಕ್ಕೆ ಪೋಷಕವಾಗುವುದು. ಡಾ॥ ಎಸ್. ವಿ. ರಂಗಣ್ಣನವರು ರುಚಿಯು ಬಗ್ಗೆ "ಬೂಡ್ಸನ್ನು ಕೊಳ್ಳಲು ನಾವು ಹಾತೊರೆಯುತ್ತೇವೆ, ಆದರೆ ಬುಕ್ಕುಗಳನ್ನು ಕೊಳ್ಳಲು ಏತಕ್ಕೆ ಆತಂಕಪಡುವುದಿಲ್ಲ?"– ಈ ಮಾತನ್ನು ನಮ್ಮ ಎಲ್ಲಾ ಕಾರ್ಯ ಕ್ಷೇತ್ರಗಳಿಗೂ ನಾವು ಅನ್ವಯಿಸಿ ಕೊಳ್ಳಬೇಕು.

ಕರ್ತವ್ಯಕ್ಕೆ ಬೆಲೆ ಬರುವುದು ಅದರ ಗಾತ್ರ ದಿಂದಲ್ಲ. ಗುಣ ಮೌಲ್ಯ ದಿಂದಲೇ. ಹಾಗಾದರೆ ಕರ್ತವ್ಯವನ್ನು ಹೇಗೆ ನಿರ್ವಹಿಸಬೇಕು ?...... ನಮ್ಮ ಕಾಯಕ ಕೇವಲ ವ್ಯಾಪಾರ ದೃಷ್ಟಿಯಾದರೆ–ಕೂಲಿತನವಾಗುವುದು. ಅದೇ ಕರ್ತವ್ಯ ಸೇವಾ ದೃಷ್ಟಿಯಾದರೆ–ದೇವ ಕಾರ್ಯವೆನಿಸುವುದು. ಮತ್ತೆ ಕರ್ತವ್ಯ ಯೋಗದೃಷ್ಟಿಯಾದರೆ (ಕಾರ್ಯ ದಕ್ಷತೆಯಿಂದ ಕೂಡಿದ್ದರೆ) ಫಲಪ್ರದವಾಗಿ ಲೋಕಕ್ಕೂ ಕ್ಷೇಮವಾಗುತ್ತದೆ.

ಕರ್ತ್ರವ್ಯಕ್ಕೆ ಎರಡು ದಾರಿಗಳಿವೆ. ಒಂದು ಪ್ರೇಯಸ್ಸು ಮತ್ತೊಂದು ಶ್ರೇಯಸ್ಸು. ಪ್ರೇಯಸ್ಸಿಗೆ ಸೀಮಿತ ದೃಷ್ಟಿ–ಪರಿಣಾಮ ಮಿತ. ಶ್ರೇಯಸ್ಸಿಗೆ ವಿಶಾಲದೃಷ್ಟಿ – ಪರಿಣಾಮ ಅಪಾರ. ಈ ಎರಡು ದಾರಿಗಳನ್ನು ಸಮನ್ವಯ ಮಾಡಿ ಕೊಂಡರೆ ಜೀವನ – ಪಾವನವೆನಿಸುವುದು. ಡಾ॥ ಡಿ. ವಿ. ಜಿ. ಯವರು ಮಂಕುತಿಮ್ಮನ ಕಗ್ಗದಲ್ಲಿ–

"ಯತನ ಕರ್ತವ್ಯವದು ನಮಗೆ ವಿದ್ಯಾಭ್ಯಾಸ।
ಹಿತಪರಿಜ್ಞಾನ ಯತ್ನಾನುಭವ ಫಲಿತ॥
ಸತತ ಯತ್ನದಿನಾತ್ಮ ಶಕ್ತಿ ಪರಿವರ್ಧಿಪುದು।
ಯತನ ಜೀವನ ಶಿಕ್ಷೆ ಮಂಕುತಿಮ್ಮ"॥

ಅಂದರೆ ಪ್ರಯತ್ನವೇ ಕರ್ತವ್ಯ, ಪ್ರಯತ್ನವೇ ಜೀವನ ಶಿಕ್ಷೆ, ಅದೇ ವಿದ್ಯಾಭ್ಯಾಸ, ಇದರಿಂದ ಹಿತ–ವಿವೇಕಾನುಭವ, ಆತ್ಮಶಕ್ತಿಯನ್ನು ಬೆಳಸಿಕೊಳ್ಳ ಬೇಕು ಎಂಬುದಾಗಿ ತಿಳಿಸಿ ಕೊಟ್ಟಿದ್ದಾರೆ.

ಇನ್ನು ಕರ್ತವ್ಯದ ಲೋಪದೋಷಗಳ ಬಗ್ಗೆ ವಿವೇಚಿಸೋಣ. ಕರ್ತವ್ಯಚ್ಯುತಿಗೆ ಮೂರು ಕಾರಣಗಳಿವೆ.

1) ಪೂರ್ವಘಟನಾವಳಿಗಳ ಚಿಂತೆ, 2) ಭವಿಷ್ಯದ ಬಗ್ಗೆ ಅತಿ ಕಾತರತೆ 3) ವರ್ತಮಾನ ಕಾಲದ-ಮಾನಸಿಕ ಗಡಿಬಿಡಿ. ಈ ಮೂರು ಕರ್ತವ್ಯ ಲೋಪದ ಪರಿಹಾರಕ್ಕೆ–ಸಮತೋಲನದ ಮನಸ್ಸು ಸೃಜನಾತ್ಮಕ ನಿರ್ಣಯ, ಮತ್ತು ಪರಿಣಾಮಕಾರಿ ಕಾಯಕ ಅವಶ್ಯಕ.

ನಮ್ಮ ಕಾಯಕವನ್ನು ಕೌಶಲದಿಂದ ಮಾಡಬೇಕು. ಇದಕ್ಕೆ ಪೋಷಕವಾಗಿ-ನಮ್ಮ ಕ್ರಿಯಾತ್ಮಕ ಶಕ್ತಿಯ ಉತ್ಪಾದನೆ, ಸಂಗ್ರಹಣೆ, ಮತ್ತು ಶಕ್ತಿಯ ನಿಯಮಿತ ಕ್ಷೇತ್ರದಲ್ಲಿ ಹರಿವಂತೆ ಮಾಡುವುದು ಉಪಯುಕ್ತ.

ಕರ್ತವ್ಯ ಹಕ್ಕಲ್ಲ, ಹೊಣೆಗಾರಿಕೆ. ಕರ್ತವ್ಯ ಹೊಣೆಗಾರಿಕೆಯಾದಾಗ ಹಕ್ಕುಗಳು ಸಹಜವಾಗಿಯೇ ಉದಿಸಿಬರುತ್ತವೆ. ಹಕ್ಕುಬೇಕು ಎನ್ನುವವರು ಕರ್ತ್ರವ್ಯವನ್ನು ಒಪ್ಪಿಕೊಳ್ಳಬೇಕು.

ನಾವು ಕರ್ತವ್ಯ ದೃಷ್ಟಿಯನ್ನು ಮರೆತರೆ ಆಗುವ ಅಕಾರ್ಯಗಳನ್ನು ಪರಿಣಾಮ ಕಾರಿಯಾಗಿ ಪುರಂದರದಾಸರು 'ಕುರುಡು ನಾಯಿ ತಾ ಸಂತೆಗೆ ಬಂತಂತೆ' ಎಂಬ ಕೀರ್ತನೆಯಲ್ಲಿ ಚಿತ್ರಿಸಿದ್ದಾರೆ. ಕರ್ತ್ರವ್ಯವನ್ನು ಮರೆತವ ಅಜ್ಞಾನಿ. ಅಜ್ಞಾನಿಯಾದ ಮಾನವನನ್ನು ದಾಸರು ಕುರುಡು ನಾಯಿಗೆ ಹೋಲಿಸಿರುತ್ತಾರೆ. ಈ ನಾಯಿ ಸಂತೆಗೆ (ಧರೆ) ಏತಕ್ಕಾಗಿ ಬಂತೆಂಬುದು ತಿಳಿದಿಲ್ಲ ಇದಿರೇ ಹರಿನಾಮವೆಂಬ ಖಂಡಸಕ್ಕರೆ ಇದ್ದರೂ, ನಾಯಿಗೆ ನೀರಸವಾದ ತುಂಡು ಎಲುಬೇ ಹಿತ. ಅಂತೆಯೇ ಮಾನವನು ಕ್ಷುಲ್ಲಕವೂ, ದುಃಖದಾಯಕವೂ ಆದ ಕರ್ತವ್ಯಗಳಲ್ಲಿ ಬಾಳನ್ನು ನಡೆಸಿ ವ್ಯರ್ಥವಾಗಿಸುತ್ತಾನೆ. ಇಷ್ಟೇ ಅಲ್ಲದೆ ಈತ ಇರುವಾಗಲು ಭಂಗ, ಸಾಯುವಾಗಲೂ ಭಂಗ, ಬಳಿಕವೂ ನರಕ. ಆದ್ದರಿಂದ ಅಜ್ಞಾನಿಯಾದ ಮಾನವ ಕರ್ತವ್ಯವನ್ನು ಅರಿತರೆ- ಸುಖಸಂತೋಷಗಳು ಲಭಿಸಿ ಮುಕ್ತಿ ಪಡೆಯಲು ಅರ್ಹನಾಗುತ್ತಾನೆ. ಈ ಸಂದರ್ಭದಲ್ಲಿ ವಚನಕಾರ 'ಅಲ್ಲಮಪ್ರಭು'ವಿನ ವಚನವನ್ನು ಸ್ಮರಿಸಬಹುದು.

ಕೊಟ್ಟ ಕುದುರೆಯನೇರಲರಿಯದೆ
ಮತ್ತೊಂದು ಕುದುರೆಯ ಬಯಸುವರು
ವೀರರೂ ಅಲ್ಲ, ಧೀರರೂ ಅಲ್ಲ

ಕರ್ತವ್ಯದಲ್ಲಿ 1) ಸ್ವಂತದ್ದು 2) ಸಂಸಾರದ್ದು 3) ನೆರೆ-ಹೊರೆಯವರದ್ದು 4) ದೇಶದ್ದು 5) ಲೋಕದ್ದು–ಎಂಬುದಾಗಿ ಐದು ವಿಭಾಗವಾಗಿ ವಿಂಗಡಿಸಬಹುದು. ಸ್ವಂತದ್ದು-ತನಗಾಗಿ, ಸ್ವಾರ್ಥಕ್ಕಾಗಿ, ಆದುದರಿಂದ ಇದು ಅಧಮ, ನೆರೆಹೊರೆ-ಸಂಸಾರದ್ದು – ತನ್ನವರಿಗಾಗಿ – ಇಲ್ಲಿ ಕರ್ತವ್ಯದ ವ್ಯಾಪ್ತಿ ವ್ಯಾಪಕವಾಗಿ-ಉತ್ತಮ, ದೇಶ ಮತ್ತು ಲೋಕ ಮಾಡುವ ಕರ್ತವ್ಯಗಳು, ಬಾಳಿಗೆ ಸಮಷ್ಟಿಯ ಫಲಿತಾಂಶವಾಗಿ ಶ್ರೇಷ್ಠಮಟ್ಟಾಗಿರುತ್ತವೆ.

ನಮ್ಮ ಪಾಲಿನ ಕರ್ತವ್ಯವನ್ನು, ಲೋಕಕ್ಕೆ ಬೆಳಕು ನೀಡುವ ಸೂರ್ಯಮುಳುಗಿದಾಗ, ತನ್ನ ಸುತ್ತಲೂ ಬೆಳಕು ಚೆಲ್ಲುವ ಪುಟ್ಟ ಹಣತೆಯಂತೆ ನೆರವೇರಿಸಿದರೂ ಸಾಕು.

ಕರ್ತವ್ಯದಲ್ಲಿ ವಿಶಾಲ ಮನೋಭಾವ, ವಿಶ್ವ ಕುಟುಂಬದ ಸಹೋದರತ್ವ, ಶಾಸ್ತ್ರವಿಹಿತವಾದ ಕರ್ಮ, ತತ್ತ್ವದರ್ಶನ ಮುಖ್ಯ, ಇಂಥಹ ದಿವ್ಯ ಕಾರ್ಯಗಳಿಂದ ಕೂಡಿದ ಕರ್ತವ್ಯಗಳನ್ನು ಮಾಡುತ್ತಾ ನೂರುವರುಷ ಬದುಕು ಎನ್ನುತ್ತದೆ ಉಪನಿಷತ್ತು ಕೂಡ– (ಈಶಾವಾಸ್ಯೋಪನಿಷತ್ 2 ನೇ ಮಂತ್ರ)

ಕುರ್ವನ್ನೇವೇಹ ಕರ್ಮಾಣಿ
ಜಿಜೀವಿಷೇಚ್ಛತಂ ಸಮಾಃ।
ಏವಂ ತ್ವಯಿ ನಾನ್ಯಥೇ ತೋಽಸ್ತಿ
ನ ಕರ್ಮ ಲಿಪ್ಯತೇ ನರೇ ॥

★

(18ನೇ ಪುಟದಿಂದ)

ಜನಕರಾಜನಿಗೆ ಸರ್ವಜ್ಞ ಪಟ್ಟಾಭಿಷೇಕ ಮಾಡಬೇಕೆಂದು ಸೂಚಿಸಿದಳು. ಜನಕ ರಾಜನು ಯಾಜ್ಞವಲ್ಕ್ಯರಿಗೆ ಕಿರೀಟಧಾರಣೆ ಮಾಡಿದಾಗ ಸಭಾಸ್ತೋಮ ಗೌರವ ಮತ್ತು ಸಂತೋಷ ವ್ಯಕ್ತ ಪಡಿಸಿತು.

ಧಾರ್ಮಿಕ ಜೀವನ ಪದ್ಧತಿಯಂತೆ ವಾನಪ್ರಸ್ಥಾಶ್ರಮಕ್ಕೆ ಯಾಜ್ಞವಲ್ಕ್ಯರು ಹೋಗಲು ನಿರ್ಧರಿಸಿ ತಮ್ಮ ಭೌತಿಕ ಸಂಪತ್ತನ್ನು ಈರ್ವರು ಪತ್ನಿಯರಿಗೆ ಸಮನಾಗಿ ಹಂಚಿದರು. ಮೈತ್ರೇಯಿ ಜ್ಞಾನದಾಹದಿಂದ 'ಈ ಭೌತಿಕ ವಸ್ತುವಿನಿಂದ ಮುಕ್ತಿ ಹೊಂದಲು ಸಾಧ್ಯವೇ' ಎಂದು ಪ್ರಶ್ನಿಸಿ ಅಮರತ್ವದ ಬೋಧನೆ ಮಾಡಲು ಬೇಡುವಳು. ಯಾಜ್ಞವಲ್ಕ್ಯರು ಹರ್ಷಿತರಾಗಿ "ಹಸಿಯಾಗಿರುವ ಕಟ್ಟಿಗೆಯಿಂದ ಉರಿ ಮಾಡಿದಲ್ಲಿ ಹೊಗೆ ಏಳುವುದು, ಹಾಗೆಯೇ ವೇದಗಳು, ಪುರಾಣಗಳು, ಕಲೆಗಳು, ಧ್ಯಾನಗಳು, ಉಪನಿಷತ್ತುಗಳು ಬೆಂಕಿಯಿಂದ ಹೊರಬಂದ ಹೊಗೆಯಂತೆ ಪರವಸ್ತುವಿನಿಂದ ಹೊರಬಂದವು. ಸರಿಯಾಗಿ ಉರಿಯಾದರೆ ಹಿಂದಿರುವ ಬೆಂಕಿಯನ್ನು ನಾವು ಕಾಣುವಂತೆ ಪರವಸ್ತುವನ್ನು ನಾವು ಕಾಣಬಹುದು" ಎಂದು ಮುಂತಾಗಿ ಬೋಧನೆ ಮಾಡಿ ತಮ್ಮೊಡನೆ ಮೈತ್ರೇಯಿಯನ್ನು ಹಿಮಾಲಯದ ತಪ್ಪಲಿಗೆ ಕರೆದುಕೊಂಡು ಹೋದರು. ಇತ್ತ ಕಾತ್ಯಾಯನಿ ಆಶ್ರಮದ ಶ್ರೀಮಾತೆಯಾಗಿ ಮುಕ್ತಿಯನ್ನು ಹೊಂದಿದಳು. ಮೈತ್ರೇಯಿ ಬ್ರಹ್ಮಜ್ಞಾನದಿಂದ ಬ್ರಹ್ಮೈಕ್ಯಳಾದಳು. ಯಾಜ್ಞವಲ್ಕ್ಯರು ತಮ್ಮ ಅಪೂರ್ವ ಚಿಂತನೆಯ ಫಲವಾದ "ಯಾಜ್ಞವಲ್ಕ್ಯ ಸ್ಮೃತಿ" ಮತ್ತು 'ಯಾಜ್ಞವಲ್ಕ್ಯ ಶಿಕ್ಷಾ' ಎಂಬ ಕೃತಿಗಳನ್ನು ಜಗತ್ತಿಗೆ ಕಾಣಿಕೆಯಾಗಿ ನೀಡಿ ಅದೃಶ್ಯರಾದರು.

ಯಾಜ್ಞವಲ್ಕ್ಯರ ದಿವ್ಯ ತೇಜಸ್ಸು ನಮ್ಮೆಲ್ಲರ ಬಾಳಿನ ಜ್ಞಾನ ದೀವಿಗೆಯಾಗಿ ಪ್ರಜ್ವಲಿಸುತ್ತಿದೆ. ಬ್ರಹ್ಮ ಜ್ಞಾನದ ದಿವ್ಯ ಸಂದೇಶಗಳು ಮಾನವ ಕಲ್ಯಾಣದ ಯೋಜನೆಗೆ ಸಹಾಯಕವಾಗಿದ್ದು ಪ್ರಾಚೀನ ಸತ್ಯವನ್ನು ಗೋಚರ ಪಡಿಸುತ್ತವೆ. ★

# ವಿರೂಪಾಕ್ಷೀ ದೇವೀ ಪೂಜೆ

ಗ್ರಾಮಗಳು ಭಾರತ ದೇಶದ ಜೀವಾಳ ವಾಗಿವೆ. ದಕ್ಷಿಣ ಭಾರತದಲ್ಲಿ ಈ ಸಂಖ್ಯೆ ಅಪಾರವಾಗಿದೆ. ಹಾಗೆಯೇ ಇಲ್ಲಿ ಪೂಜೆ ಗೊಳ್ಳುತ್ತಿರುವ ಗ್ರಾಮದೇವತೆಯರ ಸಂಖ್ಯೆಯೂ ವಿಪುಲವಾಗಿದೆ. ಬೋಪದೇವ ನೆಂಬುವನು ಇಂತಹ ನೂರಾರು ಗ್ರಾಮದೇವತೆಗಳ ಹೆಸರುಗಳನ್ನು ಉಲ್ಲೇಖಿಸಿದ್ದಾನೆ. ಸರ್ವಾಂಬ, ರೇಣುಕ, ವೀರಾಂಬಾ, ಮೂಕಾಂಬಾ, ಮಾರಿಕಾ – ಇತ್ಯಾದಿ. ಈ ಎಲ್ಲ ದೇವತೆಯರ ಪ್ರಭಾವ – ಪರಿಣಾಮಗಳು ಅಪಾರ. ಇವರೆಲ್ಲರ ನೆಲೆ ಜಾನಪದೀಯ ಹಾಗೂ ಶಾಕ್ತ ಸಂಪ್ರದಾಯ. ಸುಮಾರು ಆರನೇ ಶತಮಾನದಲ್ಲಿ ಪಶ್ಚಿಮ ಭಾರತವನ್ನು ಪ್ರವೇಶಿಸಿದ ಈ 'ದೇವೀ ಪಂಥ'ವನ್ನು ನಾವಿಂದು ಆರಾಧಿಸುತ್ತಿದ್ದೇವೆ. ಸಿಂಧೂ ಕೊಳ್ಳದ ನಾಗರಿಕತೆಯಲ್ಲೂ ಮಾತೃಪೂಜೆಯ ಮೂಲಗಳನ್ನು ಗುರುತಿಸಲು ಸಾಕಷ್ಟು ಸಾಕ್ಷ್ಯಾಧಾರಗಳಿವೆ. ಗ್ರಾಮಗಳಲ್ಲಿ ಎಂದರೆ ಹಳ್ಳಿಗಳಲ್ಲಿ ಇಂತಹ 'ದೇವಿ'ಯರ ಗುಡಿಗಳಿರುತ್ತವೆ. ಕೆಲವು ಕಡೆ ಎರಡು ಮೂರು ಗ್ರಾಮದೇವತೆಗಳೂ ಇವೆ. ಇವರ ಪೂಜೆ ಸರಳವಾದದ್ದೇ ಆಗಿದ್ದರೂ ಹಳೆಯ ರೀತಿಯಲ್ಲೇ ಇರುವುದಾಗಿದೆ. ಬೇಸಾಯಗಾರರ ವಸತಿಗಳಲ್ಲಿ, ಕಾಡುಜನರ ನೆಲೆಗಳಲ್ಲಿ, ಅಂಗಡಿಬೀದಿಗಳಲ್ಲಿ ಹೆಚ್ಚಾಗಿ ಈ 'ದೇವಿ'ಯರ ದೇವಸ್ಥಾನಗಳು ಸ್ಥಾಪಿತ ವಾಗಿವೆ. ಶಾಕ್ತರ ಪ್ರಭಾವವಿದ್ದರೆ ಊರ ಹೊರಗೂ, ವೈಷ್ಣವ ಪ್ರಭಾವವಿದ್ದರೆ ಗ್ರಾಮಮಧ್ಯದಲ್ಲೂ ಈ ದೇವಸ್ಥಾನಗಳನ್ನು ಕಟ್ಟಿರುತ್ತಾರೆ.

ಗ್ರಾಮದೇವತೆಯರು ಕಷ್ಟಗಳನ್ನು ತಂದೊಡ್ಡಿ ನಂತರ ಅದನ್ನು ನಿವಾರಿಸುವ ಶಕ್ತಿ ಸಾಮರ್ಥ್ಯಗಳುಳ್ಳವರಾಗಿದ್ದಾರೆ. ಪ್ಲೇಗು ಬಂದರೆ ಪೋಲೇರಮ್ಮನ ಪೂಜೆಯನ್ನು, ಸಿಡುಬು – ದೊಡ್ಡಮ್ಮ ಕಾಡಿದಾಗ ಶೀತಲಾ ಪೂಜೆಯನ್ನು, ಸರ್ವವಿಧವಾದ ಖಾಯಿಲೆ ಸಾವುಗಳಿಂದ ಪಾರಾಗಲು ಮಾರಿಯಮ್ಮನ ಪೂಜೆಯನ್ನು ಮಾಡುವುದನ್ನು ಕಾಣುತ್ತೇವೆ. ಇವರಲ್ಲಿ ಮುಖ್ಯವಾಗಿ ಮಾರಿಯಮ್ಮ ನವಶಕ್ತಿಯರಲ್ಲಿ ಒಬ್ಬಳಾಗಿ ಜನಾದರಣೀಯಳಾದವಳಾಗಿದ್ದಾಳೆ.

ಮಾರಿಯಮ್ಮನ ಗುಡಿಗಳು ದಕ್ಷಿಣ ದೇಶದ ಎಲ್ಲೆಡೆ ಪ್ರಸಿದ್ಧವಾಗಿವೆ. ತಿರುಚ್ಚಿರಪಳ್ಳಿ ತಂಜಾವೂರುಗಳಲ್ಲಿರುವ ಈಕೆಯ ದೇವಾಲಯಗಳು ಗಮನಾರ್ಹವಾಗಿವೆ. 'ಮಾರಿ' ದೇವತೆಯನ್ನು ಯಕ್ಕಲದೇವಿ ಮುತ್ಯಾಲಮ್ಮ, ವೆದ್ದಮ್ಮ, ಮಾರಿಮುತ್ತು ಮುಂತಾದ ಇತರ ಹೆಸರುಗಳಿಂದಲೂ ಕರೆಯುವುದು ರೂಢಿಯಲ್ಲಿದೆ. ಈಕೆಯ ಪರಿವಾರ ದೇವತೆಗಳು ಗಣಪತಿ, ಸ್ಕಂದ, ಕಾಳಿ, ದುರ್ಗೆಯರು. ಬೇವಿನಮರ ಈಕೆಯ ವಾಸಸ್ಥಾನ. ಪಶುಬಲಿ, ಬೆನ್ನುಸಿಡಿ, ಹೊಂಡ ಹಾಯುವುದು ಈಕೆಗೆ ಪ್ರಿಯವಾದ ಪೂಜಾ ವಿಧಾನಗಳಾಗಿವೆ.

ಕೋಲಾರ ಜಿಲ್ಲೆಯ ಮುಳಬಾಗಿಲಿಗೆ ಸಮೀಪದ ವಿರೂಪಾಕ್ಷಿ ಗ್ರಾಮದಲ್ಲಿಯೂ ಇಂತಹುದೊಂದು ಮಾರಿಯ ದೇವಾಲಯವಿದೆ. ಇದೊಂದು ಸರಳವಾದ ಕಟ್ಟಡದಿಂದ ಕೂಡಿದ ಗುಡಿಯಾಗಿದೆ. ಇತ್ತೀಚೆಗೆ ನಿರ್ಮಿತವಾಗಿ ಮಳೆ, ಗಾಳಿಗಳಿಂದ ಬಿಸಿಲಿನಿಂದ ವಿಗ್ರಹವನ್ನು ರಕ್ಷಿಸುತ್ತಿದೆ. ಆದರೆ ಈಕೆಗೆ ಹಿಂದಿನಿಂದ ಇದ್ದಿರಬಹುದಾದ ರಕ್ಷಣೆ ಪುರಾತನತೆಯ ಆವರಣ. ಇಲ್ಲಿನ ವಿಗ್ರಹವು ಭಯಂಕರವಾಗಿರುವುದರೊಂದಿಗೆ ಕುತೂಹಲವನ್ನು ಕೆರಳಿಸುವಂತಿದೆ.



ವಿರೂಪಾಕ್ಷಿಯ ದೇವಿ

'ಮಾರಿಯಮ್ಮ'ನು ನವಶಕ್ತಿಯರಲ್ಲೊಬ್ಬಳಾಗಿದ್ದಾಳೆಂದು ಹಿಂದೆಯೇ ಹೇಳಲಾಗಿದೆ. ಎಲ್ಲಮ್ಮ ಆದಿಶಕ್ತಿಯಾದರೆ ಮಾರೆಮ್ಮ ಆಕೆಯ ಸಹೋದರಿ. ತಲೆಯನ್ನು ಮಾತ್ರ ಪೂಜೆ ಮಾಡುವ ಪದ್ಧತಿಯನ್ನು ಎಲ್ಲಮ್ಮನ, ರೇಣುಕೆಯ ದೇವಾಲಯಗಳಲ್ಲಿ ಕಾಣುತ್ತೇವೆ.

**ಶ್ರೀ ಕೆ. ಆರ್. ನರಸಿಂಹನ್,** ಎಂ.ಎ.

ಸವದತ್ತಿ, ಚಿಕ್ಕನಾಯ್ಕನಹಳ್ಳಿಗಳು ಇವಕ್ಕೆ ನಿದರ್ಶನ. ಎಲ್ಲಮ್ಮನ ಗುಡಿಗಳಲ್ಲಿ ಮೂಲಮೂರ್ತಿಯು ಕಲ್ಲಿನಲ್ಲಿ ಕಡೆದ ಬರಿಯ ತಲೆಯಾಗಿಯೇ ಇರುವುದು ವಾಡಿಕೆಯಿದೆಯಂತೆ. ಮೂಲಸ್ಥಾನದಲ್ಲಿ ಮೂರುಕಣ್ಣಿನ ಸಿಡುಕು ಮುಖದ ಡಮರು – ತ್ರಿಶೂಲ – ಪಾಶ – ಬ್ರಹ್ಮಕಪಾಲಗಳ ಪಂಚಲೋಹದ ಮೂರ್ತಿಯಿರುವುದಂತೆ. ಹಾಗೆಯೇ ವಿರೂಪಾಕ್ಷಿ ಗ್ರಾಮದಲ್ಲೂ ಸಹಾ ಮೂಲಮೂರ್ತಿ ಬರಿಯ ಕಲ್ಲಿನ ತಲೆಯಾಗಿದೆ. ಇಲ್ಲಿಯೂ ಸಹಾ (ಅರ್ಚಕರ ಮನೆಯಲ್ಲಿ) ಉತ್ಸವ ಮೂರ್ತಿಯೊಂದಿದೆ. ಮೇಲೆ ಸೂಚಿಸಿರುವ ಎಲ್ಲ ಲಕ್ಷಣಗಳನ್ನು ಈ ಮೂರ್ತಿ ಹೊಂದಿರುವುದಾದರೂ ಪಂಚಲೋಹದ್ದೇ ಅಲ್ಲವೇ ಎಂಬುದು ಖಚಿತವಾಗಿ ತಿಳಿದಿಲ್ಲ. ಇಲ್ಲಿಯ ಮಾರಿಯಮ್ಮನೂ ಸಹಾ ಎಲ್ಲಮ್ಮನಂತೆಯೇ ಗೌಡ –

ದ್ರಾವಿಡ ಸಂಸ್ಕೃತಿಯ ಅಭಿವ್ಯಕ್ತಿಯಾಗಿ, ಪ್ರಕೃತಿಯ ಪ್ರತಿನಿಧಿಯಾಗಿಯೇ ಇದ್ದಿರಬೇಕೆನ್ನಿಸುತ್ತದೆ.

ಶಂಕರಾಚಾರ್ಯರಿಗೂ ಶಾಕ್ತ ಸಂಪ್ರದಾಯಕ್ಕೂ ಒಂದು ಸಂಬಂಧವೇರ್ಪಟ್ಟಿದೆ. ಅವರ ತಾಂತ್ರಿಕ ಚಾಕಟ್ಟಿನ ಸಾಧನೆ ಹಾಗೂ ಪ್ರಯೋಗಗಳಲ್ಲಿ ಇದನ್ನು ಕಾಣಬಹುದಾಗಿದೆ. ಸಮಯಾಚಾರದ ನಿರೂಪಣೆಯನ್ನು ಪವಿತ್ರವಾದ ತಳಹದಿಯ ಮೇಲೆ ಹಾಕಿ ನಿಲ್ಲಿಸಿದ ಕೀರ್ತಿಗೆ ಇವರು ಪಾತ್ರರಾಗಿದ್ದಾರೆ. ಆಚಾರ್ಯರು ತಾವು ದಿಗ್ವಿಜಯಕ್ಕೆ ಹೋದೆಡೆಗಳಲ್ಲಿ ಶ್ರೀಚಕ್ರವನ್ನು ಸ್ಥಾಪನೆಮಾಡಿರುವುದು ಕಂಡುಬರುತ್ತದೆ.

ಈ ಗ್ರಾಮದ ದೇವಿಯ ಶಿರೋಭಾಗದಲ್ಲಿ ಶ್ರೀಚಕ್ರವನ್ನು ಹಾಕಲಾಗಿದೆಯೆಂದು ಹೇಳುತ್ತಾರೆ. ತಂತ್ರಶಾಸ್ತ್ರದಲ್ಲಿ ಈ ಶ್ರೀಚಕ್ರದ ಸ್ಥಾನ ಉತ್ತಮವಾದದ್ದು. ಇದರಲ್ಲಿ ಬರುವ ತ್ರಿಕೋಣವು 'ತ್ರಿಪುರ'ದ ಸಂಕೇತವಾಗಿದೆ. ಇದು ತ್ರಿಪುರಾವಿದ್ಯೆಯ ರಹಸ್ಯವನ್ನೂ ಸೂಚಿಸುವಂತಿದೆ. ತ್ರಿಪುರದಹನದ ಸಂಗತಿಗೂ ಈ 'ದೇವಿ'ಗೂ ಸಂಬಂಧವಿದೆಯೆಂದು ನಂಬಲಾಗಿದೆ. ಹಾಗೆಯೇ ಉಗ್ರಳಾದ, ಭಯಂಕರ ಸ್ವರೂಪಿಯಾದ ದೇವತೆಯ ರೌದ್ರತೆಯನ್ನು ಕಡಿಮೆ ಮಾಡುವ ಉದ್ದೇಶದಿಂದಲೂ ಈ ಚಕ್ರವನ್ನು ಹಾಕಿರುವುದೆಂದು ಹೇಳುತ್ತಾರೆ.

'ದೇವಿ'ಯನ್ನು ಒಲಿಸಿಕೊಳ್ಳುವ ಹಲವಾರು ಪ್ರಯತ್ನಗಳಲ್ಲಿ ಆರಾಧನೆಯೂ ಒಂದಾಗಿದೆ. 'ಉಗಾದಿ' ಹಬ್ಬದ ಸಂದರ್ಭದಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ. ಆಗ ನಡೆಯುವ 'ಉಟ್ಲ ಪರಿಷೆ' ಒಂದು ಪ್ರಮುಖವಾದ ಆಕರ್ಷಣೆ. ಬೇರೆ ರೀತಿಯ ಪೂಜೆಗಳೂ ನಡೆಯುತ್ತವೆ. ಇದೊಂದು ಪುರಾತನತೆಯ ಭಾವನೆಗೆ ಪುಷ್ಟಿಗೊಡುವಂತಿರುವ ವಿಗ್ರಹವಾಗಿದೆ. ಜಾನಪದ ಹಿನ್ನಲೆಯಿಂದ ಆರಂಭವಾಗಿ ಗೌಡ – ದ್ರಾವಿಡ ಸಂಸ್ಕೃತಿಯ ಅಭಿವ್ಯಕ್ತಿಯಾಗಿ ಉಳಿದು ನಡೆದಿರುವ ವಿರೂಪಾಕ್ಷಿಯ ಮಾರಿಯಮ್ಮನಿಗೊಂದು ವಿಶಿಷ್ಟವಾದ ಹಿನ್ನಲೆ, ದಟ್ಟವಾದ ಪ್ರಭಾವವಿರುವುದರಲ್ಲಿ ಸಂದೇಹವೇ ಉಳಿಯುವುದಿಲ್ಲ.

---

# ಶ್ರೀ ಪದ್ಮಾವತೀ ದೇವಾಲಯ



## ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಗೃಹಲಕ್ಷ್ಮಿ

# ಗೋಪೂಜೆ

**ಶ್ರೀನಿವಾಸ ಮಠದ,** ಬಿ.ಎಸ್ಸಿ.

ನಮ್ಮ ಭಾರತೀಯ ಸಂಸ್ಕೃತಿಯಲ್ಲಿ ಗೋಮಾತೆಗೆ ಅತಿಹೆಚ್ಚಿನ ಪೂಜ್ಯ ಸ್ಥಾನವು ದೊರೆತಿದೆ. ಗೋವಿನ ಹಾಲು, ಮೊಸರು, ತುಪ್ಪ, ಸಗಣಿ, ಗಂಜಲ ಈ ಐದು ಪದಾರ್ಥಗಳು ಪವಿತ್ರವೆಂದು ತಿಳಿಯಲಾಗುತ್ತದೆ. ಈ ಐದನ್ನೂ ಸೇರಿಸಿ 'ಪಂಚಗವ್ಯ' ಎಂಬ ಪದಾರ್ಥವನ್ನು ತಯಾರಿಸುತ್ತಾರೆ. ಪಂಚಗವ್ಯವನ್ನು ಸೇವಿಸುವುದರಿಂದ ಆರೋಗ್ಯ, ಐಶ್ವರ್ಯ, ಮತ್ತು ಸಕಲ ಇಷ್ಟಸಿದ್ಧಿಯುಂಟಾಗುತ್ತದೆ.

ಗಾಂ ದೃಷ್ಟ್ವಾ ವ್ರಜ ನಮಸ್ಕೃತ್ಯ  
ಕೃತ್ವಾ ಚೈವ ಪ್ರದಕ್ಷಿಣಮ್ ।  
ಪ್ರದಕ್ಷಿಣ ಕೃತಾ ತೇನ  
ಸಪ್ತದ್ವೀಪಾ ವಸುಂಧರಾ ॥

– ಎಂಬಂತೆ ನಿತ್ಯದಲ್ಲಿಯೂ ಗೋವನ್ನು ನೋಡಿದ ಕೂಡಲೇ ನಮಸ್ಕರಿಸಿ ಪ್ರದಕ್ಷಿಣೆ ಹಾಕಬೇಕು. ಮತ್ತು ಹೀಗೆ ಪ್ರದಕ್ಷಿಣೆ ಮಾಡುವುದರಿಂದ ಪೃಥ್ವಿಯ ಮೇಲಿನ ಸಪ್ತ ದ್ವೀಪಗಳನ್ನು ಪ್ರದಕ್ಷಿಣೆ ಮಾಡಿದ ಪುಣ್ಯವು ಲಭಿಸುತ್ತದೆ.

ಈ ಕಾರಣದಿಂದ ಗೋವನ್ನು - ಕಂಡೊನೆಯೇ ಕೆಳಗಿನಂತೆ ಸ್ತೋತ್ರ ಮಾಡಬೇಕು-

ಸರ್ವಕಾಮದುಘೇ ದೇವಿ  
ಸರ್ವತೀರ್ಥಾಭಿಷೇಚನಿ ।  
ಪಾವನಿ ಸುರಭಿಶ್ರೇಷ್ಠೇ  
ದೇವಿ ತುಭ್ಯಂ ನಮೋ ನಮಃ ॥

ಕಾರ್ತೀಕ ಮಾಸ ಶುಕ್ಲಪಕ್ಷದ ಅಷ್ಟಮೀ ದಿನದಲ್ಲಿ 'ಗೋಪಾಷ್ಟಮೀ' ಎಂಬ ಉತ್ಸವವು ಸಕಲ ಹಿಂದುಗಳಿಂದ ಆಚರಿಸಲ್ಪಡುತ್ತದೆ.

ಕೂರ್ಮಪುರಾಣದಲ್ಲಿ 'ಗೋಪಾಷ್ಟಮಿ' ದಿನದಲ್ಲಿ ಆಚರಿಸತಕ್ಕ ವಿಧಾನವನ್ನು ಕೆಳಗಿನಂತೆ ವಿವರಿಸಿದ್ದಾರೆ.

ಶುಕ್ಲಾಷ್ಟಮೀ ಕಾರ್ತೀಕೇ ತು  
ಸ್ಮೃತಾ ಗೋಪಾಷ್ಟಮೀ ಬುಧೈಃ ।  
ತದ್ದಿನೇ ವಾಸುದೇವೋಽಭೂತ್  
ಗೋಪಃ ಪೂರ್ವಂ ಸ ವತ್ಸಪಃ ॥

ತತ್ರ ಕುರ್ಯಾತ್ ಗವಾಂ ಪೂಜಾಂ  
ಗೋಗ್ರಾಸಂ ಗೋಪ್ರದಕ್ಷಿಣಮ್ ।  
ಗವಾನುಗಮನಂ ಕಾರ್ಯಂ  
ಸರ್ವಾನ್ ಕಾಮಾನಭೀಪ್ಸತಾ ॥

ಎಂಬಂತೆ 'ಗೋಪಾಷ್ಟಮೀ' ದಿನದಲ್ಲಿ ಗೋಪೂಜೆಯನ್ನು ಮಾಡಿ ಗೋವಿಗೆ ನೈವೇದ್ಯವನ್ನು ಕೊಟ್ಟು, ಗೋಪ್ರದಕ್ಷಣೆಮಾಡಿ ಗೋದಾನ ಮಾಡಿದರ ಸರ್ವ ಇಚ್ಛಿತ ಕಾರ್ಯಗಳು ನೆರವೇರುತ್ತವೆ. ಮತ್ತು–

ಸುರಭೀ ವೈಷ್ಣವೀ ಮಾತಾ  
ನಿತ್ಯಂ ವಿಷ್ಣುಪದೇ ಸ್ಥಿತಾ ।  
ಗೋಗ್ರಾಸಂ ತು ಮಯಾ ದತ್ತಂ  
ಸುರಭಿಃ ಪ್ರತಿಗೃಹ್ಯತಾಮ್ ॥

ಎಂಬುದಾಗಿ ಸ್ತೋತ್ರಮಾಡಿ ಗೋವಿಗೆ ನೈವೇದ್ಯವನ್ನು ಕೊಡಬೇಕು.

ಗೋಮಯ (ಗೋವಿನ ಸಗಣಿ) ಮತ್ತು ಗಂಜಲ ಇವುಗಳಿಗೆ ಹೆಚ್ಚಿನ ಪವಿತ್ರತೆ ಉಂಟಾಗಲು ಪೂರ್ವದಲ್ಲಿ ಒಂದು ಇತಿಹಾಸ ಉಂಟು. ಅದು ಹೀಗಿದೆ –

ಹಿಂದೊಮ್ಮೆ ಗೋವುಗಳೆಲ್ಲವೂ ಸೇರಿ ತಮ್ಮಲ್ಲಿ ಶ್ರೇಷ್ಠತೆಯನ್ನು ಸಂಪಾದಿಸುಕೊಳ್ಳಲು ಅನೇಕ ವರ್ಷಗಳಕಾಲ ಬ್ರಹ್ಮದೇವರನ್ನು ಕುರಿತು ತಪಸ್ಸು ಮಾಡಿದವು. ಆದರಿಂದ ಮೆಚ್ಚಿ ಪ್ರತ್ಯಕ್ಷವಾದ ಬ್ರಹ್ಮದೇವನು ತಪಸ್ಸಿನ ಕಾರಣವನ್ನು ಕೇಳಿದನು. ಆಗ ಗೋವುಗಳು ಬ್ರಹ್ಮನನ್ನು ಕುರಿತು ಲೋಕದಲ್ಲಿ ಎಲ್ಲರಿಗಿಂತಲೂ ತಾವು ಶ್ರೇಷ್ಠರಾಗ ಬೇಕೆಂದೂ ತಮ್ಮ ಪುರೀಷೆ (ಗೋಮಯ) ಮತ್ತು ಗಂಜಲಗಳಿಂದ ಎಲ್ಲರೂ ಪಾವಿತ್ರತೆಯನ್ನು ಪಡೆಯವಂತಾಗ ಬೇಕೆಂದು ವರವನ್ನು ಕೇಳಲು ಬ್ರಹ್ಮನು 'ಅಸ್ತು'– ಹಾಗೇ ಆಗಲಿ ಎಂಬುದಾಗಿ ವರ ಕೊಟ್ಟನು. ಅಂದಿನಿಂದ ಗೋಮೂತ್ರ, ಗೋಮಯಗಳಿಗೆ ಹೆಚ್ಚಿನ ಶ್ರೇಷ್ಠತೆ ಉಂಟಾಯಿತು.

ಬ್ರಹ್ಮ ವೈವರ್ತ ಪುರಾಣದಲ್ಲಿ 'ಗೋಲೋಕ'ದ ಬಗ್ಗೆ ವಿಶೇಷವಾದ ವರ್ಣನೆ ಉಂಟು. ಅದು ಹೀಗಿದೆ –

ಗೋಲೋಕವು ಬ್ರಹ್ಮ ಲೋಕಕ್ಕೂ ಮೇಲಿರುವುದು. ಇದು ಅನಾದಿಯಾದುದು ಮತ್ತು ನಿರಾಧಾರವಾದುದು. ಇದು ಶ್ರೀ ಕೃಷ್ಣನ ವಾಸಸ್ಥಾನವಾಗಿದೆ. ಬ್ರಹ್ಮ ಲೋಕಕ್ಕೆ ಮೇಲೆ ಐವತ್ತು ಕೋಟಿ ಯೋಜನಗಳ ದೂರದಲ್ಲಿದೆ. ಇದು ರತ್ನಸಾರ ನಿರ್ಮಿತವಾದುದು. ಈ ಲೋಕವು ಏಳು ಬಾಗಿಲುಗಳು ಮತ್ತು ಏಳು ಕಂದಕಗಳಿಂದ ಕೂಡಿರುವುದು. ಇದಕ್ಕೆ ಲಕ್ಷ ಪ್ರಾಕಾರಗಳಿರುವುವು. ವಿರಜಾನದಿಯು ಇಲ್ಲಿ ಹರಿಯುತ್ತಿದೆ. ಒಂದು ನೂರು ಶಿಖರಗಳುಳ್ಳ ರತ್ನ-ಶೈಲದಿಂದ ಇದು ಆವೃತವಾಗಿದೆ. ಇದರ ಒಂದು ಶಿಖರವು ಹತ್ತುಸಾವಿರ ಯೋಜನಗಳ ಪರಿಮಾಣವುಳ್ಳದ್ದಾಗಿದೆ. ಈ ಶೈಲದ ಎತ್ತರ ಒಂದು ನೂರು ಕೋಟಿಯೋಜನಗಳು. ಇದರ ವಿಸ್ತೀರ್ಣವು ಹತ್ತು ಸಾವಿರ ಯೋಜನಗಳು. ಈ ಗೋಲೋಕದಲ್ಲಿ ಒಂದು ಸಹಸ್ರ ಕಲ್ಪವೃಕ್ಷಗಳೂ ಒಂದು ನೂರು ಪುಷ್ಪೋದ್ಯಾನಗಳೂ ಇರುವುವು. ಮೂರು ಕೋಟಿ ರತ್ನಾಭರಣಗಳಿಂದ ಕೂಡಿದ ಒಂದು ಲಕ್ಷ ಗೋಪಾಂಗನೆಯರು ಇದನ್ನು ರಕ್ಷಿಸುತ್ತಿರುವರು. ರತ್ನ ದೀಪಗಳಿಂದಲೂ ರತ್ನ ಖಚಿತ ಹಾಸಿಗೆಗಳಿಂದಲೂ ಪರಿಶೋಭಿಸುತ್ತಿರುವದು. ಗೋಲೋಕದ ಮನೆಗಳ ಸಂಖ್ಯೆಯನ್ನು ಅವುಗಳ ಸೊಬಗನ್ನೂ ಹೇಳಲು ಮತ್ತು ವರ್ಣಿಸಲು ಯಾವ ವಿದ್ವಾಂಸನಿಗೂ ಸಾಧ್ಯವಾಗದು.

ಹಾಗೂ –

ಗೋಮಯಂ ಯಮುನಾ ಸಾಕ್ಷಾತ್  
ಗೋಮೂತ್ರಂ ನರ್ಮದಾ ಶುಭಾ ।  
ಗಂಗಾ ಕ್ಷೀರಂ ತು ಯಾಸಾಂ  
ವೈಶಿಂ ಪವಿತ್ರಮತಃ ಪರಮ್ ॥

ಎಂಬಂತೆ –

ಗೋವು ಸಕಲ ಗಂಗಾಯಮುನಾ ಮುಂತಾದ ಪುಣ್ಯತೀರ್ಥ ಸ್ವರೂಪವೆಂದೂ, ಅದರ ಗಂಜಲವು ನರ್ಮದಾನದಿಯೆಂದು ಐತಿಹ್ಯವಿರುವದು.

ಒಟ್ಟಿನಲ್ಲಿ ಹೇಳಬೇಕಾದ ವಿಷಯವೆಂದರೆ ಅತಿ ಪವಿತ್ರತಮವಾದ ಗೋವನ್ನು ನಿತ್ಯದಲ್ಲಿಯೂ ಸರ್ವರೂ ಪೂಜಿಸಿ ಕೃತಾರ್ಥರಾಗಬೇಕು.

( 14 ನೇ ಪುಟದಿಂದ )



ಸಂತ ತುಕಾರಾಮರು

ಬಿಹಾರಿಲಾಲನ 'ಬಿಹಾರಿಸತ್ ನಾಯಿ' ಅನೇಕ ಪದ್ಯಗಳಲ್ಲಿ ರಾಧಾ–ಕೃಷ್ಣರ ಸುಂದರ ಹಾಗು ಮೋಹಕವಾದ ಲೀಲೆಗಳನ್ನು, ಸಂಭೋಗ–ವಿಪ್ರಲಂಭ ಶೃಂಗಾರಗಳಲ್ಲಿ ಅವರ ಸ್ಥಿತಿಯನ್ನೂ ವರ್ಣಿಸುತ್ತದೆ. ರಸಖಾನನ ಕೃತಿಯಲ್ಲಿ ಪ್ರೇಮಾಭಿವ್ಯಂಜನ ಸೊಗಸಾಗಿ ವ್ಯಕ್ತಗೊಂಡಿದ್ದರೆ ಘನಾನಂದನ ಕೃತಿಯಲ್ಲಿ ಕೃಷ್ಣನ ಭವ್ಯರೂಪದ ದಿಗ್ದರ್ಶನವಾಗುತ್ತದೆ. ಘನಾನಂದನ ಕಾವ್ಯ ಶೈಲಿ ಮತ್ತು ಪ್ರಕೃತಿವರ್ಣನೆ ಎಂತಹವರನ್ನೂ ಆಕರ್ಷಿಸುವಂಹುದಾಗಿದೆ.

ಶೃಂಗಾರಕಾಲ ಅಥವಾ ರೀತಿಕಾಲ ಎಂದು ಹಿಂದೀಸಾಹಿತ್ಯದ ಇತಿಹಾಸದಲ್ಲಿ ಖ್ಯಾತವಾಗಿರುವ ಈ ಅವಧಿಯಲ್ಲಿ ಅಸಂಖ್ಯಾತ ಕವಿಗಳು ರಾಧಾಕೃಷ್ಣರನ್ನು ಕುರಿತಂತೆ ಕೃತಿಗಳನ್ನು ರಚಿಸಿದ್ದಾರೆ.

ರಾಧಾ – ಕೃಷ್ಣರನ್ನು ಕುರಿತಂತೆ, ಕೃತಿಗಳನ್ನು ರಚಿಸಿದ ಭಕ್ತರಂತೆಯೇ ರುಕ್ಮಿಣೀಕೃಷ್ಣರನ್ನು, ಅವರ ವಿವಾಹದ ಕಥಾವಸ್ತುವನ್ನು ಆಧಾರವಾಗಿಟ್ಟುಕೊಂಡು ಅನೇಕ ಭಕ್ತಕವಿಗಳು ಕೀರ್ತನೆಗಳನ್ನೂ ಭಜನೆಗಳನ್ನೂ ಹಾಡಿದ್ದಾರೆ. ಕೃಷ್ಣನಿಗಾಗಿ ತಮ್ಮ ಸರ್ವಸ್ವವನ್ನೂ ಅರ್ಪಿಸಲು ಸಿದ್ಧರಾದ ಈ ಭಕ್ತಶಿರೋಮಣಿಗಳ ಕೃತಿಗಳಲ್ಲಿ ರುಕ್ಮಿಣೀಕಲ್ಯಾಣದ, ರೋಮಾಂಚನಕಾರಿಯಾದ ಚಿತ್ರಣವಿರುತ್ತದೆ. ಕೃಷ್ಣ – ರುಕ್ಮಿಣಿಯರನ್ನು ಆರಾಧಿಸುವ ಈ ಭಕ್ತಿಯ ವಿಧಾನಕ್ಕೆ "ಕಾಂತ ಭಾವ"ವೆಂಬ ಹೆಸರೂ ಇದೆ.

ಮಹಾರಾಷ್ಟ್ರದ ಸಂತ ಕವಿಗಳಲ್ಲಿ 'ಜ್ಞಾನೇಶ್ವರಿ'ಯ ಕರ್ತೃಗಳಾದ ಜ್ಞಾನೇಶ್ವರರು ಪ್ರಮುಖರಾದವರಾಗಿದ್ದಾರೆ. ಮರಾಠೀಭಾಷೆಯಲ್ಲಿರುವ ಈ ಕೃತಿ ಜ್ಞಾನೇಶ್ವರರ ಕಾವ್ಯ ಪ್ರತಿಭೆಗೆ ದ್ಯೋತಕವಾಗಿದೆ. ಭಗವದ್‌ಗೀತೆಯ ತತ್ತ್ವಗಳ ನಿರೂಪಣೆಯೂ ಇದರಲ್ಲಿದೆ. ಮಾನವನಿಗೆ ಭಕ್ತಿಮಾರ್ಗಕ್ಕಿಂತಲೂ ದೇವರನ್ನು ಒಲಿಸಿಕೊಳ್ಳಲು ಬೇರೆ ಸಾಧನೆಗಳಾದರೂ ಏಕೆ? ದೇವರನ್ನು ಭಕ್ತಿಮಾರ್ಗದ ದಿವ್ಯ ತತ್ತ್ವಗಳಿಂದ ಆರಾಧಿಸಬಹುದು. ಭಕ್ತಿಯ ಪರಮೋಚ್ಛ ಗುರಿಯನ್ನು ಸಾಧನೆಯಿಂದ ಸಾಧಿಸಬಹುದಾಗಿದೆ. ಮುಕ್ತಿಮಾರ್ಗವನ್ನು ಕಂಡುಕೊಳ್ಳುವಲ್ಲಿ ಭಕ್ತಿಮಾರ್ಗದ ನೆರವು ಬಹಳಷ್ಟಾಗಿದೆ ಸಂತ ಜ್ಞಾನೇಶ್ವರರು ಕೇವಲ ಜ್ಞಾನೇಶ್ವರಿಯನ್ನು ಮಾತ್ರವಲ್ಲ, ಪಂಢರಪುರದ ಆದಿದೈವವಾದ ವಿಠೋಬ ಮತ್ತು ರುಕ್ಮಾಯಿಯರನ್ನು ಕುರಿತಂತೆಯೂ ಹಲವು ಪದ್ಯಗಳನ್ನು ರಚಿಸಿದ್ದಾರೆ ಇವಕ್ಕೆ 'ಅಭಂಗ'ಗಳೆಂದು ಹೆಸರು. ಶಿವನನ್ನು ಸ್ತುತಿಸಿರುವ 'ಅಮೃತಾನುಭವ'ದ ಕರ್ತೃವೂ ಜ್ಞಾನೇಶ್ವರರೇ ಆಗಿದ್ದಾರೆ ಭಾಗವತಧರ್ಮದ ಒಳತಿರುಳನ್ನು ಅರಿತುಕೊಂಡು ಅದನ್ನು ಸರಳವಾಗಿ ಪ್ರಕಟಪಡಿಸುವಲ್ಲಿ ಜ್ಞಾನೇಶ್ವರರ ಸಾಧನೆ ಮಹತ್ವಪೂರ್ಣವಾದುದು ಜ್ಞಾನೇಶ್ವರರ ಕೀರ್ತನೆಗಳು ಇಂದಿಗೂ ಮಹಾರಾಷ್ಟ್ರದ ಸಹೃದಯರ ಹೃದಯಗಳಲ್ಲಿ ಶಾಶ್ವತವಾಗಿ ನೆಲೆಸಿಂತಿವೆ ಜ್ಞಾನೇಶ್ವರರು ತೋರಿಸಿಕೊಟ್ಟ ಈ ರೀತಿಯ ಕೃಷ್ಣ – ರುಕ್ಮಿಣಿಯರ ಆರಾಧನೆ ಅತ್ಯಲ್ಪಕಾಲದಲ್ಲಿಯೇ ಮಹಾರಾಷ್ಟ್ರದಾದ್ಯಂತ ಪಸರಿಸುವಲ್ಲಿ ಸಫಲವಾಯಿತು. ಅಲ್ಲದೆ ಮಹಾರಾಷ್ಟ್ರದ ಇತರ ಸಂತಪುರುಷರು ಕಾಂತ ಭಾವದ ಭಕ್ತಿವಿಧಾನವನ್ನು ಮುಂದುವರೆಸುವಂತಾಯಿತು.

ಜ್ಞಾನೇಶ್ವರರ ನಂತರ ಅನೇಕ ದಿನಗಳಾದ ಮೇಲೆ ಸಂತ ನಾಮದೇವರು ಹಿಂದೀ ಹಾಗು ಮರಾಠೀಭಾಷೆಗಳಲ್ಲಿ ಪಂಢರಪುರದ ವಿಠೋಬನನ್ನು ಕುರಿತು ಕೀರ್ತನೆಗಳನ್ನು ರಚಿಸಿದರು. ನಾಮದೇವರ ಅಭಂಗಗಳಲ್ಲಿ, ಭಕ್ತಿಯ ಆವೇಶ ತುಂಬಿ ಹರಿದಿರುವುದು ಗೋಚರಿಸುತ್ತದೆ. ಮಹಾರಾಷ್ಟ್ರ ಮತ್ತು ಪಂಜಾಬ್ ಪ್ರದೇಶಗಳಲ್ಲಿ ಸಂಚರಿಸುತ್ತಿದ್ದ ನಾಮದೇವರು ಅಲ್ಲೆಲ್ಲಾ ಕೃಷ್ಣಭಕ್ತಿಯ ಪ್ರಸಾರವನ್ನು ಮಾಡುವಲ್ಲಿ ಗಮನಾರ್ಹವಾದ ಪಾತ್ರವನ್ನು ವಹಿಸಿದವರಾಗಿದ್ದರು.

ಸಂಕೀರ್ತನೆಗಳಿಂದ ಪ್ರಸಿದ್ಧರಾದ, ಅನೇಕ ಅಭಂಗಗಳಿರುವ 'ಹರಿಪಥ' ಎಂಬ ಕೃತಿಯನ್ನು ರಚಿಸಿದ ಕೀರ್ತಿ ಏಕನಾಥರಿಗೆ ಸಲ್ಲುತ್ತದೆ. ತಮ್ಮ ಧಾರ್ಮಿಕ ಅನುಭವಗಳನ್ನು ಏಕನಾಥರು ತಮ್ಮ ಅಭಂಗಗಳಲ್ಲಿ ಹೇಳಿಕೊಂಡಿರುವುದುಂಟು. ಏಕನಾಥರ ಉಲ್ಲೇಖವೂ ಕೃಷ್ಣರುಕ್ಮಿಣಿಯರ ಆರಾಧನೆಯ ಪರಂಪರೆಯಲ್ಲಿ ಮುಖ್ಯವಾದುದಾಗಿದೆ.

ಮಹಾರಾಷ್ಟ್ರದ ಸಂತರಲ್ಲಿ ಸಂತತುಕಾರಾಂರ ಹೆಸರು ಅವಿಸ್ಮರಣೀಯವಾದುದಾಗಿದೆ. ತುಕಾರಾಮರು ಸಾಂಸಾರಿಕ ಜೀವನದಲ್ಲಿ ಅನೇಕ ಕಷ್ಟಗಳನ್ನನುಭವಿಸಿದರೂ, ಅದನ್ನು ತೋರ್ಪಡಿಸಿಕೊಳ್ಳದೆ ಪಂಢರಪುರದ ಪಾಂಡುರಂಗನನ್ನು ತಮ್ಮ ಆರಾಧ್ಯದೈವವನ್ನಾಗಿ ಮಾಡಿಕೊಂಡು ಅನೇಕ ಅಭಂಗಗಳನ್ನು ರಚಿಸಿದರು. ತುಕಾರಾಮರಿಗೆ ಈ ರೀತಿ ಭಗವಂತನ ನಾಮಸಂಕೀರ್ತನೆಯನ್ನು ಮಾಡುವ ಅಭಂಗವನ್ನು ರಚಿಸುವಲ್ಲಿ ಹಿಂದಿನ ಸಂತರ ಕೀರ್ತನೆಗಳು ನೆರವು ನೀಡಿದವು. ತುಕಾರಾಂ ಸಂತ ಜ್ಞಾನೇಶ್ವರರ ಜ್ಞಾನೇಶ್ವರಿಯನ್ನೂ, ನಾಮದೇವ–ಏಕನಾಥರ ಅಭಂಗಗಳನ್ನೂ ಓದಿಕೊಂಡಿದ್ದಿರಬಹುದು. ಶಿವಾಜಿ ಮಹಾರಾಜರ ಆಸ್ಥಾನಕ್ಕೂ ಅನೇಕ ಕೀರ್ತನೆಗಳನ್ನು ಬರೆದು ಕಳುಹಿಸಿಕೊಟ್ಟಿದ್ದರಂತೆ – ತುಕಾರಾಂ ರಾಮ – ಕೃಷ್ಣ–ಹರಿ ಮಂತ್ರಗಳನ್ನು ತುಕಾರಾಮರಿಗೆ ಅವರ ಗುರುಗಳು ಉಪದೇಶಿಸಿದ್ದುಂಟು ನಿರಾಕಾರ ಅಥವಾ ನಿರ್ಗುಣ ಪಂಥದ ತತ್ತ್ವಗಳನ್ನು ಒಪ್ಪದ ತುಕಾರಾಂ, ಸಗುಣ ಸಾಕಾರ ರೂಪನಾದ ಪಾಂಡುರಂಗನಲ್ಲಿ ಭಕ್ತಿಯನ್ನೂ, ವಿಶ್ವಾಸವನ್ನೂ ಇಟ್ಟವರಾಗಿದ್ದರು.

ಭಗವಂತನನ್ನು ಕುರಿತಂತೆ ತುಕಾರಾಂರು ರಚಿಸಿದ 'ಅಭಂಗಗಳು', ಮಹಾರಾಷ್ಟ್ರದ ಜನಗಳಲ್ಲಿ ಅದ್ಭುತವಾದ ಪರಿಣಾಮವನ್ನುಂಟುಮಾಡಿ ಅವರಲ್ಲಿ ಕೃಷ್ಣಭಕ್ತಿಯ ಸ್ಫುರಣೆಯಾಗುವಂತೆ ಅವು ಪ್ರೇರೇಪಿಸಿದವು, ಗೀತೆಯನ್ನುಪದೇಶಿಸಿದ ದೇವಕೀನಂದನನಾದ ಕೃಷ್ಣನನ್ನು ವಿಧವಿಧವಾಗಿ ಪ್ರಾರ್ಥಿಸಿದ್ದಾರೆ. ತಮ್ಮ ಭವಬಂಧನಗಳನ್ನು ದೂರವಾಗುವಂತೆ ಮಾಡೆಂದು ಕೇಳಿಕೊಂಡಿದ್ದಾರೆ. ತಮ್ಮ ಅನೇಕ ಅಭಂಗಗಳಲ್ಲಿ ಬ್ರಹ್ಮಜ್ಞಾನದ ಮಹತ್ವವನ್ನರಿಯಲಿಚ್ಛಿಸಿದ ತುಕಾರಾಮರ ಕೀರ್ತನೆಗಳಲ್ಲಿ, ಭಕ್ತಿಯ ತೀವ್ರತೆಯಿರುವುದನ್ನು ಗಮನಿಸಬಹುದು. ಮರಾಠೀ ಭಾಷೆಯಲ್ಲಿನ ಈ 'ಅಭಂಗಗಳು' ಸರಳವಾಗಿದ್ದು, ಓದುಗರಿಗೆ ಸುಲಭವಾಗಿ ಅರ್ಥವಾಗುವಂತಹುವಾಗಿವೆ.

ವಿಠಾಬಾಯಿ ವಿಶ್ವಂಭರೆ ಭವಚ್ಛೇದಕೆ ತೋರಿ
ಗುಂತಲಿಸಾ ಅಗೆ ವಿಶ್ವ ವ್ಯಾಪಕೇ ।
ನ ಕರೀ ನ ಕರೀ ಆತಾಂ ಆಲಸ ಅಹೆರೂ
ವ್ಯಹವಯಾ ಪ್ರಗಟ ಕೈ ಚೆಂದುರಿ ಅಂತರೂ॥

ಮಾತೆಯಾದ ರುಕ್ಮಿಣೀ, ಭವಬಂಧನಗಳನ್ನು ಕಿತ್ತೊಗೆಯುವ ಅಗೋಚರನಾದ ಕೃಷ್ಣ; ನನ್ನನ್ನು ರಕ್ಷಿಸು. ಎಲ್ಲಿದ್ದರೂ ನನ್ನ ಕೈಬಿಡದೆ ಕಾಪಾಡು. ನೀನು ವಿಶ್ವವ್ಯಾಪಕನಲ್ಲವೇ–ಹೀಗೆ ಆರ್ತತೆಯಿಂದ ತುಕಾರಾಮರು ಅನೇಕ ಸಂಕೀರ್ತನೆಗಳಲ್ಲಿ ದೇವರನ್ನು ಪ್ರಾರ್ಥಿಸಿರುವುದುಂಟು. "ವಿಠಲ ವಿಸ್ತಾರಲಾ ಜನನೀ। ಸಪ್ತಹಿ ಪಾತಾಲೇಝುರನೀ।

( 28ನೇ ಪುಟ ನೋಡಿ )

# ಕಿಶೋರ ಜಗತ್



# ಅಗಸ್ತ್ಯ ಮಹರ್ಷಿ

'ರಸಿಕ ಪುತ್ತಿಗೆ'

ಇದುತನಕ ತಿಳಿದಂತೆ ತಪೋವನದಲ್ಲಿರುವ ಋಷಿಗಳು ಕೇವಲ ಸಾಧು ತಾಪಸಿಗಳು ಮಾತ್ರವಲ್ಲ — ಜ್ಞಾನಿಗಳು ಕೂಡಾ ಹೌದು. ಅವರು ವೇದ ಮಂತ್ರಗಳನ್ನು ರಚಿಸಿದ್ದರು. ಯುದ್ಧ ವಿದ್ಯೆ — ನಕ್ಷತ್ರ ವಿದ್ಯೆಗಳಂತಹ ವಿದ್ಯೆಗಳಲ್ಲಿ ಪಂಡಿತರಾಗಿದ್ದರು. ರಾಜಕಾರ್ಯದಲ್ಲಿಯೂ ಪಾಲುಗೊಳ್ಳುತ್ತಿದ್ದರು. ಈಗ ನಾವು ತಿಳಿಯುವ ಋಷಿ ಅತ್ಯಂತ ಖ್ಯಾತ ಪರ್ಯಟಕನಾಗಿದ್ದ, ವಿದ್ವಾಂಸನೂ, ಜ್ಞಾನಿಯೂ ಕೂಡ. ತನ್ನ ವಿದ್ಯೆ, ಜ್ಞಾನದ ಪ್ರಚಾರಕ್ಕಾಗಿ ಹಿಮಾಲಯದಿಂದ ಕನ್ಯಾಕುಮಾರಿಯ ತನಕ ಸಂಚರಿಸಿದ್ದ. ದಾರಿಯಲ್ಲಿ ಅನೇಕ ಕಷ್ಟ– ಅಜ್ಞಾತ ದೇಶ ಜಾತಿಗಳ ಸಂಪರ್ಕ, ಆದರೆ ತಾನು ಹೋದೆಡೆಯಲ್ಲಿ ತನ್ನ ಧರ್ಮ ಸಂಸ್ಕೃತಿಯ ಪ್ರಚಾರ ಮಾಡುತ್ತಿದ್ದ. ಇದನ್ನು ನಮ್ಮ ಪ್ರಾಚೀನ ಇತಿಹಾಸಕಾರರು ರುಚಿಕರ ಕತೆಗಳಲ್ಲಿ ಬರೆದಿದ್ದಾರೆ. ಅವುಗಳಲ್ಲಿ ಒಂದು ಕತೆ: ವಿಂಧ್ಯಾಚಲ ಪರ್ವತ ಒಮ್ಮೆ ತಾನಾಗಿ ಮೇಲೇಳತೊಡಗುತ್ತದೆ. ಅದರ ಏಳುವಿಕೆಯಿಂದ ಸೂರ್ಯ ಚಂದ್ರರ ದಾರಿಗಡ್ಡವಾಯಿತು, ದೇವತೆಗಳು ವಿಂದ್ಯಾಚಲವನ್ನು ಅನೇಕ ಸಲ ಪ್ರಾರ್ಥಿಸಿದರು. ಇದನ್ನು ಕೇಳಿದ ಅಗಸ್ತ್ಯ ಪರ್ವತದ ಬಳಿಗೆ ಹೋಗಿ – ಎಲೈ ಪರ್ವತ ಶ್ರೇಷ್ಠನೇ, ಕಾರ್ಯಾಂತರದಿಂದ ನಾನು ದಕ್ಷಿಣದ ಕಡೆ ಹೋಗುತ್ತಿದ್ದೇನೆ. ನನಗೆ ಬಗ್ಗಿ ದಾರಿ ಕೊಡು. ನಾನು ಬರುವತನಕ ಹಾಗೇ ಇರು.

ವಿಂಧ್ಯಾಚಲ ಬಗ್ಗಿ ದಾರಿ ಕೊಟ್ಟಿತು. ಋಷಿ ದಕ್ಷಿಣ ಕಡೆ ಹೋದವನು ಬರಲೇ ಇಲ್ಲ. ಆದರಿಂದ ಪರ್ವತದ ಎತ್ತರ ತಗ್ಗಿ ಸೂರ್ಯಚಂದ್ರರ ಪರ್ಯಟನಕ್ಕೆ ತೊಂದರೆ ಇಲ್ಲದಾಯಿತು.

ಕಾಲಕೇಯನೆಂಬ ರಕ್ಕಸ ಸಮುದ್ರದಲ್ಲಿ ವಾಸಿಸುತ್ತಿದ್ದ. ರಾತ್ರಿಯ ಹೊತ್ತು ಆತ ಹೊರಬಿದ್ದು, ದೇವತೆಗಳಿಗೂ, ತಪೋವನದ ಋಷಿಗಳಿಗೂ ತೊಂದರೆ ಕೊಡುತ್ತಿದ್ದ– ಸಮುದ್ರದಲ್ಲಿರುವುದರಿಂದ ಆತನನ್ನು ಯಾರೂ ಕೊಲ್ಲಲು ಆಗುತ್ತಿರಲ್ಲ. ದೇವತೆಗಳು ಅಗಸ್ತ್ಯನ ಬಳಿಗೆ ಹೋಗಿ "ಸ್ವಾಮಿ, ತಾವು ಸಮುದ್ರವನ್ನು ಕುಡಿದರೆ ನಾವು ಕಾಲಕೇಯನನ್ನು ಕೊಲ್ಲುತ್ತೇವೆ" ಎಂದು ಹೇಳಿದರು. ಅಗಸ್ತ್ಯನು ಹಾಗೇ ಮಾಡಿದ. ಸಮುದ್ರ ಒಣಗಿತು. ಕಾಲಕೇಯ ಕೊಲ್ಲಲ್ಪಟ್ಟ.

ಈ ಕತೆಯ ಅರ್ಥವೂ ಸುಸ್ಪಷ್ಟ. ಅಗಸ್ತ್ಯ ಮುನಿಯ ಮೂರ್ತಿಗಳು ಹಿಂದೂ ಮಹಾಸಾಗರದಲ್ಲಿನ ಇಂಡೋನೇಶಿಯಾ ದ್ವೀಪದಲ್ಲಿ ಸಿಗುತ್ತವೆ. ಆತನೇ ಪ್ರಥಮವಾಗಿ ಸಮುದ್ರ ದಾಟಿ, ಜಾವಾ ಸುಮಾತ್ರಾ, ಬೋರ್ನಿಯೋ, ಸಯಾಮ ಮುಂತಾದೆಡೆ ಆರ್ಯ ಸಂಸ್ಕೃತಿಯ ಪ್ರಚಾರ ಮಾಡಿದವನು. ಈ ಪ್ರಚಾರದ ಪರಿಣಾಮವಾಗಿ ಆರ್ಯ ಜಾತಿಯು ನಿಧಾನವಾಗಿ ಇಡಿಯ ದಕ್ಷಿಣದಲ್ಲಿ ಹರಡಿ ದಕ್ಷಿಣ ಪೂರ್ವ ದೇಶಗಳಲ್ಲಿ ರಾಜ್ಯ ಸ್ಥಾಪಿಸಿದರು. ಇತಿಹಾಸವನ್ನು ಆಳವಾಗಿ ಓದಿದಾಗ ಇದು ತಾನಾಗಿ ತಿಳಿಯುತ್ತದೆ.

ದಕ್ಷಿಣ ದೇಶದವರು, ವಿಶೇಷವಾಗಿ ತಮಿಳರು ಅಗಸ್ತ್ಯನನ್ನು ತನ್ನವನೆಂದೇ ತಿಳಿಯುತ್ತಾರೆ. ತಮಿಳು ಭಾಷೆಯ ಮೊದಲ ವ್ಯಾಕರಣವನ್ನು ಅಗಸ್ತ್ಯನೇ ಬರೆದನೆಂದು ಅವರು ನಂಬುತ್ತಾರೆ. ಉತ್ತರ ದಕ್ಷಿಣ ಭೇದ ತೊಡೆದು ಹಾಕಿ ಒಂದಾಗಿಸಿದ ಮೊದಲನೆಯ ಋಷಿ ಅಗಸ್ತ್ಯ. ದಕ್ಷಿಣ ಭಾರತದೆಲ್ಲೆಡೆ ಆತನ ಆಶ್ರಮವಿದೆ. ಕರ್ನಾಟಕದ ಬಾದಾಮಿ, ಕೊಡಗಿನ ಬ್ರಹ್ಮಗಿರಿ, ಆಂಧ್ರದ ದ್ರಾಕ್ಷಾರಾಮ, ತಂಜಾವೂರಿನ ಅಗಸ್ತ್ಯಂಪಲ್ಲಿ, ತಿರುನಲ್ವೇಲಿಯ ಪೊದಿಯ ಮಲೈ, ಅಗಸ್ತ್ಯಾವರಂ ಪ್ರಸಿದ್ಧವಾದವುಗಳು. ರಾಮಚಂದ್ರನು ಸೀತಾದೇವಿಯನ್ನು ಹುಡುಕುತ್ತ ಹೋಗುವ ಸಂದರ್ಭಕ್ಕೆ ಮಹರ್ಷಿ ಅಗಸ್ತ್ಯನ ಆಶ್ರಮ ಪೊದಿಯ ಮಲೈಯಲ್ಲಿ ಸ್ಥಾಪಿತವಾಗಿತ್ತು.

ಇದಕ್ಕಿಂತ ಮೊದಲು ಆತ ದಂಡಕಾರಣ್ಯದಲ್ಲಿದ್ದ. ಹೆಸರಿನಿಂದ ತಿಳಿವಂತೆ ಇದು ದೊಡ್ಡ ಭಯಂಕರ ಕಾಡಾಗಿತ್ತು. ನರಭಕ್ಷಕ ರಾಕ್ಷಸರು ಇದರಲ್ಲಿರುತ್ತಿದ್ದರು, ಮಹರ್ಷಿ ಅಲ್ಲಿಗೆ ತಲುಪಿದಾಗ ರಾಕ್ಷಸರು ವಿರೋಧಿಸಿದರು. ಯುದ್ಧವನ್ನೂ ಅವರೊಡನೆ ಅಗಸ್ತ್ಯ ಮಾಡಬೇಕಾಯಿತು. ಶ್ರೀರಾಮ ದಂಡಕಾರಣ್ಯ ತಲುಪಿದಾಗ ಅಗಸ್ತ್ಯ ಗೋದಾವರಿ ತೀರದ ಪಂಚವಟಿಯಲ್ಲಿದ್ದ. ಇದರಿಂದ ಆತ ನಿರಂತರ ಮುಂದುವರಿಯುತ್ತಲೇ ಇದ್ದನೆಂದು ತಿಳಿಯಬಹುದು. ಆತ ದೈತ್ಯರಾಜ ವಾತಾಪಿ ಹಾಗೂ ತಾಟಕಿಯ ಪತಿ ಶುಂಡನನ್ನು ಕೊಂದಿದ್ದ.

ಇಂತು ಅಗಸ್ತ್ಯನೊಬ್ಬ ಜ್ಞಾನಿ, ಪರ್ಯಟಕ, ಯೋಧ ಹಾಗೂ ಧರ್ಮ ಸಂಸ್ಕೃತಿಯ ಪ್ರಚಾರಕನಾಗಿದ್ದ. ಇಷ್ಟು ಮಾತ್ರವಲ್ಲದೆ ಇನ್ನೂ ಸ್ವಲ್ಪ ಹೆಚ್ಚು ಆಗಿದ್ದ.

ಆತನ ಮದುವೆ ವಿದರ್ಭರಾಜನ ಕನ್ಯೆ ಲೋಪಾಮುದ್ರೆಯ ಜೊತೆಗೆ ನಡೆಯಿತು. ಲೋಪಾಮುದ್ರೆ ತಾನು ಮಹಾ ವಿದುಷಿಯಾಗಿದ್ದಳು. ಆಕೆ ರಾಜಕುಮಾರಿ. ಮದುವೆಯಾಗುವಾಗ ಆಕೆ ಪಣ ತೊಟ್ಟಳೇನೆಂದರೆ – ತನ್ನ ಕುಲ ಗೌರವಕ್ಕೆ ಅನುಗುಣವಾದ ವಸ್ತ್ರಾಭರಣ ಕೊಡುವ ತನಕ ತಾನು ಋಷಿಯ ಜೊತೆ ಇರಲಾರೆ. ಅಗಸ್ತ್ಯನು ವಾತಾಪಿ (ಬಾದಾಮಿ)ಯ ರಾಜನಿಂದ ಧನ ಸಂಗ್ರಹಿಸಿ ಹೆಂಡತಿಗೆ ಕೊಟ್ಟ. ಆ ಕುರಿತು ಒಂದು ಕತೆ ಇದೆ.

ಒಮ್ಮೆ ವಾತಾಪಿ ರಾಜ್ಯದಲ್ಲಿ ತೀವ್ರವಾದ ಬರಗಾಲ ಬಂತು. ಆಗ ಋಷಿ ಅಗಸ್ತ್ಯ ಕೊಡಗಿನ ಬ್ರಹ್ಮಗಿರಿಯಲ್ಲಿದ್ದ. ಬರಗಾಲದಿಂದಾಗಿ ಜನ ಸಾಯತೊಡಗಿತು. ಲೋಪಾಮುದ್ರೆಗೆ ಇದನ್ನು ನೋಡಲಾಗಲಿಲ್ಲ, ಆಕೆ ಒಡನೆಯೇ ಒಂದು ನದಿಯಾಗಿ ಹರಿದಳು. ಅದೇ ಕಾವೇರಿ ನದಿ.

ಈ ಕತೆ ಅನೇಕ ರೀತಿಯಲ್ಲಿದೆ. ಆದರೆ ಇದರ ನೇರವಾದ ಸ್ಪಷ್ಟ ಅರ್ಥವಿಷ್ಟೆ. ಧರ್ಮ ಪ್ರಚಾರ ಮಾಡುತ್ತಾ ಲೋಪಾಮುದ್ರೆಯ ಜೊತೆಗೆ ಅಗಸ್ತ್ಯ ಕಾವೇರಿ ನದಿಯ ಉಗಮಸ್ಥಾನವಾದ ಬ್ರಹ್ಮಗಿರಿಗ ತಲುಪಿದ. ಈ ರೀತಿ ಆತ ಕಾವೇರಿ ನದಿಯನ್ನು ಕಂಡುಹಿಡಿದ. ಬಹುಶಃ ಈ ಯಾತ್ರೆಯಲ್ಲಿ ಲೋಪಾಮುದ್ರೆ ಸತ್ತಿರಬೇಕು. ನಂತರ ಕವಿಗಳು ಆತನ ಸಾಹಸದ ಕತೆಯನ್ನು ಬರೆಯುತ್ತ ಲೋಪಾಮುದ್ರೆಯ ನದಿಯಾದಿ ಹರಿದಳೆಂದು ಬರೆದರು.

ವಸಿಷ್ಠರ ಬಗೆಗೆ ಹೇಳಿದಂತೇ ಅಗಸ್ತ್ಯನೆಂಬುದೂ ಒಬ್ಬನೇ ಋಷಿಯ ಹೆಸರಲ್ಲ. ಆದೂ ಒಂದು ಪದವಿ. ಆ ಪೀಠವನ್ನೇರಿದವರೆಲ್ಲಾ ಅಗಸ್ತ್ಯರುಗಳೇ ಆಗುತ್ತಿದ್ದರು.

ಆದುದರಿಂದ ಮೇಲೆ ಹೇಳಿದ ಕತೆಗಳೆಲ್ಲಾ ಒಬ್ಬನೇ ಅಗಸ್ತ್ಯನದ್ದಾಗಿರಬೇಕೆಂಬ ನಿಬಂಧನೆಯಿಲ್ಲ. ತಮಿಳಿಗ ವ್ಯಾಕರಣ ಬರೆದ, ಕಾವೇರಿಯನ್ನು ಕಂಡು ಹಿಡಿದ, ಮೊಟ್ಟ ಮೊದಲು ದಕ್ಷಿಣ ಭಾರತಕ್ಕೆ ಹೋದ, ಸಮುದ್ರ ದಾಟಿ ವಿದೇಶದಲ್ಲಿ ಧರ್ಮ ಪ್ರಚಾರ ಮಾಡಿದ, ಆರ್ಯರ ರಾಜ್ಯ ಸ್ಥಾಪಿಸಿದ ಅಗಸ್ತ್ಯರೆಲ್ಲ ಬೇರೆ ಬೇರೆ ಆಗಿರಬಹುದು. ಆದರಿಂದೇನಾಗಬೇಕಾಗಿದೆ. ಒಬ್ಬನೇ ಅಗಸ್ತ್ಯನಿರಲಿ – ಅನೇಕ ಅಗಸ್ತ್ಯರಿರಲಿ. ಅಗಸ್ತ್ಯನು (ರು) ಆರ್ಯ ಸಂಸ್ಕೃತಿಯ ಪ್ರಚಾರವನ್ನು ಭಾರತದಲ್ಲಷ್ಟೇ ಅಲ್ಲ, ಸಮುದ್ರದಾಚಿನ ದೇಶಗಳಲ್ಲಿಯೂ ಮಾಡಿದ ಹೆಮ್ಮೆ ನಮಗೆ. (ವಿವಿಧ ಮೂಲಗಳಿಂದ)

---

(15 ನೇ ಪುಟದಿಂದ)

ಇದರಿಂದ ಪರಮಾತ್ಮ ಸಂತುಷ್ಟನಾಗುವನೆಂದೂ ಅವರು ನಂಬಿದ್ದರು. ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸವನ್ನು ಮುಗಿಸಿ ಪ್ರಕಟವಾದ ದಿನವು ಇದೇ ಆಗಿದೆ. ಉಜ್ಜನಿಯ ರಾಜನಾಗಿದ್ದ ವಿಕ್ರಮಾದಿತ್ಯನಿಗೂ ಇಂದೇ ಪಟ್ಟಾಭಿಷೇಕವಾಯಿತು. ಅಂದಿನಿಂದ ವಿಕ್ರಮ ಶಕೆ ಆರಂಭವಾಯಿತು. ಈ ಕಾಲಗಣನೆ ಇಂದಿಗೂ ಉತ್ತರ ಭಾರತದಲ್ಲಿ ಹೆಚ್ಚು ಪ್ರಚಾರದಲ್ಲಿದ. ಈ ರೀತಿ ದೀಪಾವಳಿ ಮೂರು ದಿವಸಗಳವರೆಗೆ ವೈಭವದಿಂದ ನಡೆಯುತ್ತದೆ ಇಂದು ನಾವು ದೀಪಾವಳಿಯನ್ನು ಮನೆ ಮನೆಗಳಲ್ಲಿ ಅತೀ ಸಂಭ್ರಮದಿಂದ ಆಚರಿಸುತ್ತೇವೆ. ದೀಪಾವಳಿ ಬಂತೆಂದರೆ ವೇಟೆ ಪಟ್ಟಣ ಹಳ್ಳಿಗಳು ಅಲಂಕಾರಗೊಳ್ಳುತ್ತವೆ. ಎಲ್ಲೆಲ್ಲೂ ಪಟಾಕಿ ಸುರು ಸುರು ಕಡ್ಡಿಗಳು ಹಚ್ಚಲ್ಪಡುತ್ತವೆ. ಬಡವ ಶ್ರೀಮಂತನೆಂಬ ಭೇದ ಭಾವ ಇಲ್ಲದೆ ದೀಪಾವಳಿ ಸಂಭ್ರಮದಿಂದ ನಡೆಯುತ್ತದೆ. ಹೀಗೆ ಭಾರತದ ವಿವಿಧ ವರ್ಗದ ಜನರಿಗೂ ಆನಂದ ಸಂತೋಷಗಳನ್ನು ಒದಗಿಸುವ ಹಬ್ಬವೆಂದರೆ ದೀಪಾವಳಿ ಹಬ್ಬ. ಹಬ್ಬಗಳಲ್ಲೆಲ್ಲ ಹಿರಿಯ ಹಬ್ಬವೂ ಬೆಳ್ಳಂ ಬೆಳಕಿನ ಹಬ್ಬವೂ ದೀಪಾವಳಿ ಹಬ್ಬ. ★

---

(26 ನೇ ಪುಟದಿಂದ)

ವಿಠಲ ವ್ಯಾಪಕ ತ್ರಿಭುವನೀ ವಿಠಲ ಮುನಿಮಾನಸೀ ॥" ಎಂಬ ಈ ಸಂಕೀರ್ತನೆಯಲ್ಲಿಯೂ ವಿಠಲನ ಭವ್ಯರೂಪದ ದಿಗ್ದರ್ಶನವಾಗಿದೆ. ಮಹಾರಾಷ್ಟ್ರದ ಸಂತಭಕ್ತರಲ್ಲಿ, ಸಂತಶಿರೋಮಣಿಯಾದ ತುಕಾರಾಮರು ತಮ್ಮ ಸಾಧನೆಯ ಮಾರ್ಗದಲ್ಲಿ, ಪರಮೋಚ್ಚ ಗುರಿಯಾದ ಕೈವಲ್ಯವನ್ನು ಸಾಧಿಸಿಕೊಂಡವರಾಗಿದ್ದರೆನ್ನಬಹುದು.

ಈ ರೀತಿಯಾಗಿ, ಈ ಕೃಷ್ಣೋಪಾಸಕ ಸಂತಭಕ್ತರು ಕೃಷ್ಣಭಕ್ತಿಯ ಪ್ರಚಾರ ಜನಗಳಲ್ಲಾಗುವಂತೆ ಮಾಡುವಲ್ಲಿ ಸಹಾಯಕರಾಗಿದ್ದರು. ಇಷ್ಟೇ ಜನ ಕೃಷ್ಣಭಕ್ತರಿದ್ದರೆಂದು ತಿಳಿಯಬಾರದು. ಇನ್ನೂ ಅಸಂಖ್ಯಾತ ಕೃಷ್ಣಭಕ್ತರು ಭಾರತದೇಶದಲ್ಲಿ ಆಗಿಹೋದರು ಅವರುಗಳ ಪರಿಚಯವಿರಲಿ, ಕ್ರಮಬದ್ಧವಾಗಿ ಅವರುಗಳ ಹೆಸರನ್ನು ಕೊಡುವುದೂ ಕಷ್ಟಸಾಧ್ಯವಾದ ಕೆಲಸವೇ ಸರಿ. ಪ್ರಮುಖ ಕಷ್ಣೋಪಾಸಕರಾದ ಕೃಷ್ಣಭಕ್ತರನ್ನು, ಅವರ ಕೃತಿಗಳ ವಿಷಯವನ್ನು ಸಂಕ್ಷಿಪ್ತದಲ್ಲಿ, ಪರಿಚಯ ಮಾಡಿಕೊಡಲಾಗಿದೆ. ★

---

ಬದರಿಕಾಶ್ರಮದ ಯಾತ್ರೆಯು ಭಾರತೀಯರಿಗೆ ಪರಮ ಪವಿತ್ರವಾದುದು. ಒಂದಾನೊಂದು ಕಾಲದಲ್ಲಿ ದಕ್ಷಿಣಭಾರತದಿಂದ ಈ ಯಾತ್ರೆಗೆ ಹೋಗುವವರು ಹಿಂದಿರುಗುವುದೇ ಬಹು ಕಷ್ಟವಾಗಿತ್ತು. ಈಗ ೨೫ ವರ್ಷಗಳವರೆಗೆ ಪಾದಚಾರಿಗಳಾಗಿಯೇ ಹೋಗಿ ಬರಬೇಕಾಗಿತ್ತು ಈಗ ಯು. ಪಿ ಸರ್ಕಾರದವರು ಬಹು ಸುಗಮವಾದ ರಸ್ತೆಯನ್ನು ಮಾಡಿರುವುದರಿಂದ ಸರಿಯಾದ ವಾಹನಗಳಲ್ಲಿ ಒಂದೆರಡು ದಿನಗಳಲ್ಲಿ ಹೋಗಿ ಬರಬಹುದು ಈಗಂತೂ ಸರ್ಕಾರದವರು ಎಲ್. ಟಿ. ಸಿ. ಸೌಲಭ್ಯಗಳನ್ನು ಕಲ್ಪಿಸಿದಮೇಲೆ ಅನೇಕರು ಇಲ್ಲಿಗೆ ಹೋಗಿ ಬರುತ್ತಿದ್ದಾರೆ. ಅಲ್ಲಿಗೆ ಯಾತ್ರಾರ್ಥಿಗಳಾಗಿ ಹೋಗಿ ಬರುವವರೆಲ್ಲ ಆ ಯಾತ್ರೆಗೆ ಸಂಬಂಧಪಟ್ಟ ವಿಷಯವನ್ನು ಪರಿಚಯ ಮಾಡಿಕೊಂಡು ಹೋಗುವುದು ಮೇಲು. ಇತರರಿಗೂ ಅದರ ಪರಿಚಯ ವಿಶೇಷಪ್ರಯೋಜನಕಾರಿಯಾಗುವುದು.

ಬದರಿಗೆ ಹೋಗಬೇಕಾದರೆ ಕೊನೆಯ ರೈಲ್ವೆ ನಿಲ್ದಾಣ ಹೃಷೀಕೇಶ, ಇಲ್ಲಿಂದ ಬದರಿಗೆ ನಿಷ್ಕೃಷ್ಟ ಕಾಲದಲ್ಲಿ ಬಸ್ಸುಗಳು ಹೊರಡುವುವು. ಆದರೆ ಯಾತ್ರಾರ್ಥಿಗಳು ಸಾಮಾನ್ಯವಾಗಿ ಗಂಗೆಯಲ್ಲಿ ಸ್ನಾನಮಾಡುವುದಕ್ಕೂ, ಸ್ವಲ್ಪ ವಿಶ್ರಾಂತಿಯನ್ನು ಪಡೆಯುವುದಕ್ಕೂ ಹಿಂದಿನ ನಿಲ್ದಾಣವಾದ ಹರಿದ್ವಾರದಲ್ಲಿಯೇ ಇಳಿಯುತ್ತಾರೆ. ಇಲ್ಲಿ ಖಾಸಗೀ ಬಸ್ಸುಗಳೂ 'ಟಾಕ್ಸಿ' ಗಳೂ ಸಿಕ್ಕುತ್ತವೆ.

ಹರಿದ್ವಾರ ಇದು ದೆಹಲಿಯಿಂದ ೧೧೦ ಮೈಲಿ ದೂರದಲ್ಲಿದೆ. ಸಮುದ್ರಮಟ್ಟದಿಂದ ೯೨೪ ಅಡಿ ಎತ್ತರದಲ್ಲಿದೆ. ಬದರಿಗೆ ಹೋಗಲು ಇದು ಹೆಬ್ಬಾಗಿಲು – ಇಲ್ಲಿ ಬ್ರಹ್ಮಕುಂಡವೆಂಬ ಒಂದು ಸ್ನಾನಘಟ್ಟವಿದೆ. ಇಲ್ಲಿಯೇ ಗಂಗಾನದಿಯು ಪರ್ವತಪ್ರದೇಶದಿಂದ ಸಮಸ್ಥಳಕ್ಕಿಳಿದು ವಿಸ್ತಾರವಾದ ಪ್ರದೇಶದಲ್ಲಿ ಹರಿಯಲು ಪ್ರಾರಂಭವಾಗುವುದು. ಇಲ್ಲಿಂದಲೇ ಯಾತ್ರಾರ್ಥಿಗಳು ಸಣ್ಣ ಸ್ಥಾಲಿಗಳಲ್ಲಿ ಗಂಗೆಯನ್ನು ಶೇಖರಿಸುವುದು. ಬ್ರಹ್ಮಕುಂಡದಲ್ಲಿ ಗಂಗಾಮಾತೆಯ ದೇವಸ್ಥಾನವಿದೆ. ಸಾಯಂಕಾಲದಲ್ಲಿ ಇಲ್ಲಿ ನಡೆಯುವ ಗಂಗಾಪೂಜೆಯು ಬಹು ಆಕರ್ಷಕವಾಗಿರುತ್ತದೆ. ದೇವಸ್ಥಾನದ ಮುಂದಿರುವ ಗಂಗಾನದಿಯ ಪ್ರದೇಶದಲ್ಲಿ ಅಸಂಖ್ಯಾತವಾದ ಮೀನುಗಳ ಸಮೂಹವಿದೆ. ಅಲ್ಲಿ ಅವುಗಳಿಗೆ ತಿಂಡಿಯನ್ನು ಹಾಕಿ ಮೇಲಕ್ಕೆ ಬರಿಸಿ ನೋಡುವ ದೃಶ್ಯ ಬಹುಮನೋಹಕವಾಗಿದೆ.

ಹರಿದ್ವಾರದಲ್ಲಿ ಯಾತ್ರಾರ್ಥಿಗಳಿಗೆ ಸೌಕರ್ಯಕರವಾಗಿರುವ ಅನೇಕ ಸತ್ರಗಳಿವೆ. ದಾಕ್ಷಿಣಾತ್ಯರಿಗೆ ಮದರಾಸ್ ಸತ್ರ ಮತ್ತು ಕರ್ಣಾಟಕ ಸತ್ರಗಳು ಬಹು ಸುಖಕರವಾಗಿವೆ. ಅವುಗಳಲ್ಲಿಯೂ



# ತೀರ್ಥಕ್ಷೇತ್ರದರ್ಶನ

ಮದರಾಸ್ ಸತ್ರದ ಒಳಭಾಗದಲ್ಲಿಯೇ ಗಂಗಾನದಿಯು ಹರಿಯುವುದರಿಂದ ಸ್ನಾನಾದಿಗಳಿಗೆ ಬಹು ಅನುಕೂಲವಾಗಿದೆ.

ಹೃಷೀಕೇಶ ಇದು ಹರಿದ್ವಾರದಿಂದ ೧೫ ಮೈಲಿಗಳಲ್ಲಿದೆ. ಹರಿದ್ವಾರದಿಂದ ಇಲ್ಲಿಗೆ ರೈಲಿನಲ್ಲಾಗಲಿ ಬಸ್ಸಿನಲ್ಲಾಗಲಿ ಪ್ರಯಾಣ ಮಾಡಬಹುದು ಸಮುದ್ರಮಟ್ಟದಿಂದ ೧೦೧೬ ಅಡಿ ಎತ್ತರದಲ್ಲಿದೆ. ಗಂಗಾನದಿಯ ದಡದಲ್ಲಿದೆ. ಇಲ್ಲಿ 'ತ್ರಿವೇಣೀ' ಮೊದಲಾದ ಸ್ನಾನ ಘಟ್ಟಗಳಿವೆ. ಇಲ್ಲಿ ಭರತ ಮತ್ತು ಹೃಷೀಕೇಶನ ದೇವಾಲಯಗಳಿವೆ. ಇಲ್ಲಿ ಉತ್ತಮವಾದ ವಿಶ್ರಾಂತಿಗೃಹಗಳೂ ದಕ್ಷಿಣದೇಶದ ಆಚಾರಗಳು ಸಿಕ್ಕಬಹುದಾದ ಭೋಜನಶಾಲೆ

ದೇವಪ್ರಯಾಗ ಹರಿದ್ವಾರದಿಂದ ೫೯ ಮೈಲಿ ದೂರದಲ್ಲಿ ಸಮುದ್ರಮಟ್ಟದಿಂದ ೧೭೦೦ ಅಡಿ ಎತ್ತರದಲ್ಲಿದೆ. ಇಲ್ಲಿ ವಿಷ್ಣುಪದಿ ಮತ್ತು ವಿಷ್ಣುಗಂಗಾ ಅಥವಾ ಅಲಕನಂದ ಮತ್ತು ಭಾಗೀರಥಿ ನದಿಗಳು ಸಂಗಮವಾಗಿ ಮುಂದೆ ಗಂಗಾನದಿಯಾಗಿ ಹರಿಯುವುವು, ಆದಿಶಂಕರರಿಂದ ಪ್ರತಿಷ್ಠಿತವಾದುದೆಂದು ಪ್ರಸಿದ್ಧವಾಗಿರುವ ಒಂದು ರಂಗನಾಥ ದೇವಾಲಯವು ಇಲ್ಲಿದೆ. ಇಲ್ಲಿರುವ ದೇವರಿಗೆ ಪುರುಷೋತ್ತಮನೆಂದು ಹೆಸರು. ಅಮ್ಮನವರಿಗೆ ಪುಂಡರೀಕವಲ್ಲಿಯೆಂದೂ ವಿಮಾನಕ್ಕೆ ಮಂಗಳವಿಮಾನವೆಂದೂ ಹೆಸರು. ಈ ಕ್ಷೇತ್ರವನ್ನು ಪೆರಿಯಾಳ್ವಾರರು ತಮ್ಮ 'ಪೆರಿಯ ತಿರು

# ಬದರಿಕಾಶ್ರಮ

ಗಳೂ ಇವೆ. ತಿ. ತಿ. ದೇ. ಸತ್ರವೂ ಇದೆ. ಶಿವಾನಂದಾಶ್ರಮವೂ ಬಿರ್ಲಾ ಮನೆತನದವರಿಂದ ನಿರ್ಮಿತವಾದ ಸೀತಾಭವನವೂ ಇಲ್ಲಿ ಪ್ರೇಕ್ಷಣೀಯವಾದ ಸ್ಥಳಗಳು. ಶ್ರೀ ವೆಂಕಟೇಶ್ವರಸ್ವಾಮಿ ದೇವಸ್ಥಾನವೂ ಉಂಟು.

ಲಕ್ಷ್ಮಣಜೂಲಾ: ಹೃಷೀಕೇಶದಿಂದ ೩ ಮೈಲಿ ದೂರದಲ್ಲಿದೆ. ಸಮುದ್ರಮಟ್ಟದಿಂದ ೧೧೦೦ ಅಡಿ ಎತ್ತರದಲ್ಲಿದೆ. ಗಂಗಾತೀರದಲ್ಲಿ ಲಕ್ಷ್ಮಣ ಅಥವಾ ಲಕ್ಷ್ಮೀನಾರಾಯಣ ದೇವಾಲಯವಿದೆ. ಇಲ್ಲಿಯೇ ಅನೇಕ ಋಷಿಗಳು ತಪಸ್ಸುಮಾಡಿದ ಸ್ವರ್ಗಾಶ್ರಮವೆಂಬ ಸ್ಥಳವಿದೆ. ಇಲ್ಲಿಗೆ ಲಕ್ಷ್ಮಣಜೂಲಾ ಎಂಬ ತೂಗು ಸೇತುವೆಯ ಮೇಲೆ ಕಾಲುನಡಿಗೆಯಲ್ಲಿ ಹೋಗಬಹುದು.

ಡಾ॥ ಎನ್. ಅನಂತರಂಗಾಚಾರ್

ಮೊಳಿ'ಯ (೪–೭) ಹತ್ತು ಪಾಶುರಗಳಲ್ಲಿ ಹಾಡಿದ್ದಾರೆ. ಈ ದೇವಾಲಯಕ್ಕೆ ಸೇರಿದ ಹಾಗೆಯೇ ಬದರೀನಾಥ, ಕಾಲಭೈರವ ಮತ್ತು ಮಹಾದೇವರ ದೇವಾಲಯಗಳಿವೆ.

ಶ್ರೀನಗರ· ಹರಿದ್ವಾರದಿಂದ ೬೫ ಮೈಲಿ ದೂರದಲ್ಲಿ ಸಮುದ್ರಮಟ್ಟದಿಂದ ೧೭೦೬ ಅಡಿ ಎತ್ತರದಲ್ಲಿದೆ. ಇಲ್ಲಿ ವಿಷ್ಣು ಮತ್ತು ಲಕ್ಷ್ಮೀನಾರಾಯಣ ದೇವಾಲಯಗಳಿವೆ. ಪ್ರಾಚೀನ ಶ್ರೀನಗರವು ಕ್ರಿ. ಶ. ೧೮೯೪ ರಲ್ಲಿ ಬಿರಹಿಗಂಗಾನದಿಯ ಪ್ರವಾಹದಿಂದ ನಾಶವಾಯಿತೆಂದು ಹೇಳುತ್ತಾರೆ. ಹೊಸನಗರವು ಈಚೆಗೆ ನಿರ್ಮಿತವಾದುದು. ಈಗ ಇದು ಗರ್ಹವಾಲ್ ಜಿಲ್ಲೆಯ ಮುಖ್ಯಪಟ್ಟಣ.

ರುದ್ರಪ್ರಯಾಗ: ಇದು ಹರಿದ್ವಾರದಿಂದ ೧೦೪ ಮೈಲಿ ದೂರದಲ್ಲಿ ಸಮುದ್ರಮಟ್ಟದಿಂದ ೨೦೦೦ ಅಡಿ ಎತ್ತರದಲ್ಲಿದೆ. ಇದು ಅಲಕನಂದ ಮತ್ತು ಮಂದಾಕಿನೀ ನದಿಗಳ ಸಂಗಮ ಸ್ಥಳ.

ಈ ನದಿಯ ಒತ್ತಿನಲ್ಲಿಯೇ ಮುಂದೆ ಬದರಿ ರಸ್ತೆಯು ಮುಂದುವರಿಯುವುದು ಇಲ್ಲಿ ರುದ್ರೇಶ್ವರ ಮಹಾದೇವಾಲಯವಿದೆ. ಇಲ್ಲಿಯೇ ನಾರದರು ಸಂಗೀತರಹಸ್ಯವನ್ನು ಸಂಪೂರ್ಣವಾಗಿ ಅಭ್ಯಾಸಮಾಡಿದುದು.

ಕೌಸರ್ ಹರಿದ್ವಾರದಿಂದ ೧೧೯ ಮೈಲಿಯಲ್ಲಿದೆ. ಇಲ್ಲಿ ವಿಮಾನಗಳು ಇಳಿಯಲು ಅನುಕೂಲವಾದ ವಿಸ್ತಾರವಾದ ಬಯಲುಪ್ರದೇಶವಿದೆ

ನಂದಪ್ರಯಾಗ ಹರಿದ್ವಾರದಿಂದ ೧೩೮ ಮೈಲಿಯಲ್ಲಿ ಸಮುದ್ರಮಟ್ಟದಿಂದ ೩೦೦೦ ಅಡಿ ಎತ್ತರದಲ್ಲಿದೆ. ನಂದಮಹರ್ಷಿಗಳು ಇಲ್ಲಿ ತಪಸ್ಸು ಮಾಡಿದುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇಲ್ಲಿಯೇ ಕಣ್ವಋಷಿಗಳ ಆಶ್ರಮವಿದ್ದುದು ಶಕುಂತಲೆಯ ವಿವಾಹವಾದುದೂ ಇಲ್ಲಿಯೇ

ಈ ಮುಖ್ಯರಸ್ತೆಯ ೬ ಮೈಲಿಯ ದೂರದಲ್ಲಿ ವೈರನಕುಂಡವೆಂಬ ತೀರ್ಥವಿದೆ. ಇಲ್ಲಿಯೇ ರಾವಣನು ಕೈಲಾಸಪರ್ವತವನ್ನೆತ್ತಲು ಪ್ರಯತ್ನಪಟ್ಟುದು.

ಸಮೋಲಿ ಹರಿದ್ವಾರದಿಂದ ೧೪೪ ಮೈಲಿಯಲ್ಲಿ ಸಮುದ್ರಮಟ್ಟದಿಂದ ೩೧೫೦ ಅಡಿ ಎತ್ತರದಲ್ಲಿದೆ. ಇಲ್ಲಿ ಯಾತ್ರಾರ್ಥಿಗಳಿಗೆ ಎಲ್ಲ ಸೌಕರ್ಯಗಳೂ ಇವೆ. ಇದು ಈ ಭಾಗದ ಮುಖ್ಯಪಟ್ಟಣ. ಸಮುದ್ರಮಟ್ಟಕ್ಕಿಂತ ೨೩೫೦ ಅಡಿ ಎತ್ತರದಲ್ಲಿರುವ ಕೋಹನ್‌ತಾಲ್ ಎಂಬ ಕೆರೆಯನ್ನು ನೋಡಲು ಇಲ್ಲಿಂದ ಹೋಗುತ್ತಾರೆ

ಪೀಪಲ್ ಕೋಟೆ: ಹರಿದ್ವಾರದಿಂದ ೧೪೪ ಮೈಲಿಯಲ್ಲಿ ಸಮುದ್ರಮಟ್ಟದಿಂದ ೪೦೦೦ ಅಡಿ ಎತ್ತರದಲ್ಲಿದೆ. ಸಾಮಾನ್ಯವಾಗಿ ಎಲ್ಲ ಬಸ್ಸುಗಳೂ ರಾತ್ರಿಯಲ್ಲಿ ಇಲ್ಲಿ ತಂಗುವುವು, ಇಲ್ಲಿಯೂ ಎಲ್ಲ ಸೌಕರ್ಯಗಳಿವೆ

ಜೋಶೀಮಠ ಹರಿದ್ವಾರದಿಂದ ೧೬೫ ಮೈಲಿಯಲ್ಲಿ ಸಮುದ್ರಮಟ್ಟದಿಂದ ೬೧೫೦ ಅಡಿ ಎತ್ತರದಲ್ಲಿದೆ. ಇಲ್ಲಿ ನರಸಿಂಹ ಮತ್ತು ವಾಸುದೇವರ ದೇವಾಲಯಗಳಿವೆ ಆದಿಶಂಕರರು ಇಲ್ಲಿ ಬಂದು ನೇರಳೆಯ ಮರದ ಕೆಳಗೆ ಕುಳಿತು ತಪಸ್ಸುಮಾಡಿ ದಿವ್ಯಜ್ಞಾನದಿಂದ 'ಶಂಕರಭಾಷ್ಯ'ವನ್ನು ರಚಿಸಿದರೆಂದು ಪ್ರತೀತಿ. ಅವರೇ ಇಲ್ಲಿ ಒಂದು ಜ್ಯೋತಿಷಪೀಠವನ್ನು ಸ್ಥಾಪಿಸಿದರು.

ವಿಷ್ಣುಪ್ರಯಾಗ ಹರಿದ್ವಾರದಿಂದ ೧೬೮ ಮೈಲಿಯಲ್ಲಿ ಸಮುದ್ರಮಟ್ಟದಿಂದ ೪೫೦೦ ಅಡಿ ಎತ್ತರದಲ್ಲಿದೆ. ಅಲಕನಂದ ಮತ್ತು ವಿಷ್ಣುಗಂಗಾ ನದಿಗಳ ಸಂಗಮದಲ್ಲಿದೆ. ಇಲ್ಲಿಂದ ಸುಮಾರು ೨ ಮೈಲಿಯ ಕೆಳಗೆ ರಸ್ತೆಯ ಇಳಿಜಾರಿನಲ್ಲಿ ಮಹಾವಿಷ್ಣುವಿನ ದೇವಸ್ಥಾನವಿದೆ. ಇಲ್ಲಿ ನಾರದರು ವಿಷ್ಣುವನ್ನು ಅಷ್ಟಾಕ್ಷರೀ ಮಂತ್ರದಿಂದ ಆರಾಧನೆ ಮಾಡಿದರು.

ಪಾಂಡುಕೇಶ್ವರ· ಹರಿದ್ವಾರದಿಂದ ೧೮೪ ಮೈಲಿಯಲ್ಲಿ ಸಮುದ್ರಮಟ್ಟದಿಂದ ೬೪೫೦ ಅಡಿ ಎತ್ತರದಲ್ಲಿದೆ. ಚಳಿಗಾಲದ ೬ ತಿಂಗಳುಗಳ ಕಾಲದಲ್ಲಿ ಬದರೀ ದೇವಾಲಯವನ್ನು ಮುಚ್ಚಿರುವಾಗ ಅಲ್ಲಿಯ ಉತ್ಸವವಿಗ್ರಹಗಳನ್ನು ಇಲ್ಲಿ ಇಟ್ಟಿರುತ್ತಾರೆ. ವಾಸುದೇವ ದೇವಸ್ಥಾನವಿದೆ. ಇಲ್ಲಿಯೇ ಪಾಂಡುಮಹಾರಾಜನು ತಪಸ್ಸು ಮಾಡಿದುದು. ಪಾಂಡವರು ಜನಿಸಿದುದೂ ಇಲ್ಲಿಯೇ. ಇಲ್ಲಿ ಯೋಗಬದರಿ ದೇವಾಲಯವಿದೆ.

ಹನುಮಾನ್‌ಚಟ್ಟಿ ಹರಿದ್ವಾರದಿಂದ ೧೮೭ ಮೈಲಿಯಲ್ಲಿ ಸಮುದ್ರಮಟ್ಟದಿಂದ ೮೦೦೦ ಅಡಿ ಎತ್ತರದಲ್ಲಿದೆ. ಪಾಂಡವರು ವನವಾಸದಲ್ಲಿದ್ದಾಗ ಇಲ್ಲಿಯೇ ಹನುಮಂತ ಮತ್ತು ಭೀಮಸೇನರು ಪಕ್ಕದಲ್ಲಿರುವ ಗಂಧಮಾದನ ಪರ್ವತದಲ್ಲಿ ತಮ್ಮ ಪರಸ್ಪರ ಶಕ್ತಿಯನ್ನು ಪರೀಕ್ಷಿಸಿದುದು ಮತ್ತು ತಾವಿಬ್ಬರೂ ವಾಯುಪುತ್ರರೆಂದು ಅರಿತುದು.

ಬದರೀನಾಥ್· ಹರಿದ್ವಾರದಿಂದ ೨೦೨ ಮೈಲಿ ದೂರದಲ್ಲಿ ಸಮುದ್ರಮಟ್ಟದಿಂದ ೧೦೩೫೦ ಅಡಿ ಎತ್ತರದಲ್ಲಿದೆ. ಹನುಮಾನ್ ಚಟ್ಟಿಯಿಂದ ೨ ಮೈಲಿ ಮೇಲಕ್ಕೆ ಹೋದರೆ ಬದರಿಯ ಸುಂದರ ದೃಶ್ಯವನ್ನು ಕಾಣಬಹುದು. ಮನಸ್ಸಿಗೆ ಬಹಳ ಆಪ್ಯಾಯಮಾನವಾಗುವುದು. ಬದರಿಯಲ್ಲಿ ಬಸ್ ನಿಲ್ದಾಣವು ದೇವಸ್ಥಾನದಿಂದ ೨ ಫರ್ಲಾಂಗ್ ದೂರದಲ್ಲಿ ದೊಡ್ಡ ಮೈದಾನದಲ್ಲಿದೆ. ಅಲಕನಂದಾ ನದಿಯ ದಡದಮೇಲಿದೆ. ಹತ್ತಿರವೇ ವಿಶ್ರಾಂತಿ ಗೃಹಗಳೂ, ಧರ್ಮಶಾಲೆಗಳೂ ಅಂಗಡಿಯ ಸಾಲುಗಳೂ ಇವೆ. ಬದರಿಯನ್ನು ಸೇರುವುದಕ್ಕೆ ಒಂದು ಗಂಟೆಯ ಮೊದಲೇ ಛಳಿಯಾಗುವುದರಿಂದ ಬೆಚ್ಚಗಿರುವ ಉಣ್ಣೆಯ ಬಟ್ಟೆಯ ಆವಶ್ಯಕತೆ ಅನಿವಾರ್ಯವಾಗುವುದು. ರಾತ್ರಿಯಂತೂ ಅಲ್ಲಿ ಅವುಗಳ ಆವಶ್ಯಕತೆ ಇನ್ನೂ ಹೆಚ್ಚುವುದು. ಅಲಕನಂದದ ದಡಕ್ಕೂ ದೇವಸ್ಥಾನಕ್ಕೂ ಮಧ್ಯೆ ತಪ್ತಕುಂಡವಿದೆ. ಇಲ್ಲಿಗೆ ಉಷ್ಣೋದಕದ ಬುಗ್ಗೆಗಳಿಂದ ಕೊಳವಿಯ ಮೂಲಕ ದಿನಪೂರ್ತಿ ಆಗಾಗ ಬಿಸಿನೀರು ತುಂಬಲ್ಪಡುವುದು. ಇಲ್ಲಿ ಸ್ನಾನಮಾಡಿದ ಮೇಲೆ ಯಾತ್ರಾರ್ಥಿಗಳಿಗೆ ಸ್ವಲ್ಪ ಲವಲವಿಕೆಯುಂಟಾಗಿ ಮುಂದಿನ ದೇವರಸೇವೆಗೆ ಉತ್ಸಾಹವುಂಟಾಗುವುದು. ಕೆಲವು ಮೆಟ್ಟಲುಗಳನ್ನು ಹತ್ತಿದಮೇಲೆ ಮುಂದಿನ ಸಿಂಹದ್ವಾರದಲ್ಲಿ ಗರುಡನ ದೇವಾಲಯವಿದೆ. ಬದರೀನಾಥನ ದರ್ಶನಕ್ಕೆ ಮೊದಲು ಗರುಡನ ದರ್ಶನವಾಗಬೇಕು. ಬದರೀನಾಥನ ದೇವಾಲಯವು ೧೦೦ ಅಡಿ ಉದ್ದವೂ ೬೦ ಅಡಿ ಅಗಲವೂ ಆಗಿರುತ್ತದೆ. ದೇವಾಲಯವು ಅಷ್ಟು ಆಕರ್ಷಕವಾಗಿಲ್ಲ. ದೊಡ್ಡಕಲ್ಲು, ಮರ ಮತ್ತು ಜಿಂಕ್‌ಷೀಟುಗಳಿಂದ ಕಟ್ಟಲ್ಪಟ್ಟಿದೆ. ಸ್ತ್ರೀ ಮತ್ತು ಪುರುಷ ಯಾತ್ರಾರ್ಥಿಗಳು ಪ್ರತ್ಯೇಕ ಕ್ಯೂ'ವಿನಲ್ಲಿ ದೇವಾಲಯವನ್ನು ಪ್ರವೇಶಿಸಬೇಕು. ಭಗವಂತನೆದುರಿಗೆ 5 ನಿಮಿಷಮಾತ್ರ ನಿಲ್ಲಬಹುದು. ತೃಪ್ತಿಯಾಗದಿದ್ದರೆ ಪುನಃ 'ಕ್ಯೂ' ವಿನಲ್ಲಿ ಸೇರಿಕೊಂಡು ಬರಬಹುದು. ಧರ್ಮದರ್ಶನವಲ್ಲದೆ ಯಾತ್ರಾರ್ಥಿಗಳು ತಿರುಮಂಜನ, ಅರ್ಚನೆ, ಕರ್ಪೂರಾರತಿಗಳನ್ನು ಆರ್ಜಿತಸೇವೆಗಳನ್ನಾಗಿ ಮಾಡಿಸಿ ಪ್ರತ್ಯೇಕವಾಗಿ ದೇವರ ದರ್ಶನಮಾಡಬಹುದು.

ಬದರೀನಾಥನು ತಪೋಭಂಗಿಯಲ್ಲಿದ್ದಾನೆ. ಅಮ್ಮನವರು ಅರವಿಂದವಲ್ಲಿ ತಾಯಾರ್.

ವಿಮಾನ ತಪ್ತ ಕಾಂಚನ ನಾಮಧೇಯವುಳ್ಳದು. ತಪ್ತಕುಂಡಲತೀರ್ಥದಲ್ಲಿ ನಾರಾಯಣನು ನರನಿಗೆ ಅಷ್ಟಾಕ್ಷರೀಮಂತ್ರವನ್ನು ಉಪದೇಶಿಸಿದನೆಂಬುದು ಇಲ್ಲಿಯ ಐತಿಹ್ಯ, ಪೆರಿಯಾಳ್ವಾರರು ತಮ್ಮ 'ಪೆರಿಯಾಳ್ವಾರ್ ತಿರುಮೊಳಿ'ಯ (೪-೭-೯) ಒಂದು ಪಾಶುರದಲ್ಲಿಯೂ ತಿರುಮಂಗೈ ಆಳ್ವಾರರು 'ಪೆರಿಯ ತಿರುಮೊಳಿ'ಯ (೧-೩) (೧೦) ೧-೪ (೧೦)ಇಪ್ಪತ್ತು ಪಾಶುರಗಳಲ್ಲಿಯೂ 'ಶಿರಿಯ ತಿರುಮಡಲ್'ನ (೩೯) ಒಂದು ಪಾಶುರದಲ್ಲಿಯೂ ಈ ಕ್ಷೇತ್ರವನ್ನು ಕುರಿತು ಹಾಡಿದ್ದಾರೆ.

ಇಲ್ಲಿಯ ಅರ್ಚಕರು ನಂಬೂದ್ರಿಗಳು ಪ್ರಧಾನ ಅರ್ಚಕರಿಗೆ 'ರಾತ್‌ಜಿ' ಎಂದು ಹೆಸರು. ಇವರು ಕೇರಳೀಯ ಬ್ರಾಹ್ಮಣರು ದೇವರ ದರ್ಶನ ಮಾಡುವಾಗ ಅವರು ದೇವಸ್ಥಾನದ ಮಹಿಮೆಯನ್ನು ತಿಳಿಸುವರು.

ಬದರೀವೃಕ್ಷವು ಲಕ್ಷ್ಮಿಗೆ ಪರಮಪ್ರಿಯವಾದ ವೃಕ್ಷ. ಇಲ್ಲೊಂದು ಮಹಾಬದರೀವೃಕ್ಷವು ಗರ್ಭಗೃಹದಲ್ಲಿದೆಯಂತೆ. ಅದರಡಿಯಲ್ಲಿಯೇ ಬದರೀನಾಥನು ತಪಸ್ಸುಮಾಡುತ್ತಿರುವನಂತೆ. ಅದು ಕಲಿಯುಗದ ಮಾನವರಿಗೆ ಕಾಣುವುದಿಲ್ಲವಂತೆ ಭಕ್ತರಿಗೆ ಅಷ್ಟಾಕ್ಷರೀ ಮಂತ್ರವನ್ನು ಉಪದೇಶ ಮಾಡುವ ಉದ್ದೇಶದಿಂದಲೇ ಸ್ವಾಮಿಯು ಪರಮಪದದಿಂದ ಹಿಮಾಲಯದ ಈ ಸ್ಥಾನಕ್ಕೆ ದಯಮಾಡಿ ಇಲ್ಲಿಯ ಬದರೀವೃಕ್ಷದಡಿಯಲ್ಲಿ ಜಟಿ ಮತ್ತು ಶಂಖಚಕ್ರಧಾರಿಯಾಗಿ ಯೋಗಮುದ್ರೆಯಲ್ಲಿ ಪ್ರತಿಷ್ಠಿತನಾಗಿದ್ದಾನೆ ಅವನ ಬಲಗಡೆ ಕುಬೇರಗರುಡರೂ ಎಡಗಡೆ ನಾರದ, ಉದ್ಧವ, ನರ ಮೊದಲಾದವರೂ ಇದ್ದಾರೆ. ಆತ್ಮಜ್ಞಾನಕ್ಕೆ ತಪಸ್ಸು ಆವಶ್ಯಕವೆಂಬುದನ್ನು ನಾರಾಯಣನು ನರನಿಗೆ ತನ್ನ ಪ್ರತ್ಯಕ್ಷ ನಿದರ್ಶನದಿಂದ ಶ್ರುತಪಡಿಸಿ ನರನೂ ತಪಸ್ಸುಮಾಡುವ ಹಾಗೆ ಪ್ರೇರೇಪಿಸಿ, ತಪೋಕಾರ್ಯದಲ್ಲಿ ಗುರುಶಿಷ್ಯಪರಂಪರೆಯ ಆವಶ್ಯಕತೆಯನ್ನು ದೃಢೀಕರಿಸುವುದು – ಈ ಅವತಾರದ ರಹಸ್ಯವೆಂಬುದು ದೇವರ ದರ್ಶನದಿಂದ ಸ್ಪಷ್ಟವಾಗುವುದು.

ಈ ನರನಾರಾಯಣರು ಸತ್ಯಯುಗದಲ್ಲಿ ಧರ್ಮದೇವನಿಗೂ ದಕ್ಷಪ್ರಜಾಪತಿಯ ಮಗಳಾದ ಮೂರ್ತಿದೇವಿಗೂ ವಿಷ್ಣುವಿನ ಅವತಾರವಾಗಿ ಪ್ರತ್ಯಕ್ಷರಾದರು. ಅವರು ಬಾಲ್ಯದಿಂದ ತಪಸ್ವೀ ಜೀವನವನ್ನು ಹಿಮಾಲಯದಲ್ಲಿಯೂ ಗಂಧಮಾದನ ಪರ್ವತದಲ್ಲಿಯೂ ನಡೆಸಿ ಕೊನೆಗೆ ಮಹಾವಿಷ್ಣುವಿನ ಪಾದವನ್ನು ಸೇರಿದರು. ದ್ವಾಪರದಲ್ಲಿ ಅವರು ಕೃಷ್ಣಾರ್ಜುನರಾಗಿ ಅವತರಿಸಿದ್ದರು.

ದೇವಸ್ಥಾನದ ಪ್ರಾಕಾರದಲ್ಲಿ ಲಕ್ಷ್ಮೀದೇವಿಗೂ ಆದಿಶಂಕರರಿಗೂ ಪ್ರತ್ಯೇಕವಾದ ಸನ್ನಿಧಿಗಳಿವೆ. ದೇವಸ್ಥಾನದ ಎಡಭಾಗದಲ್ಲಿ ಸದಾ ಭಜನೆ ನಡೆಯುತ್ತಿರುತ್ತದೆ. ರುದ್ರವೀಣೆಯ ಸಹಾಯದಿಂದ ನಾಯಕನೊಬ್ಬನು ಅವರಿಗೆ ಮಾರ್ಗದರ್ಶನ ಮಾಡುತ್ತಿರುತ್ತಾನೆ. ಅವರ ಸಾನ್ನಿಧ್ಯದಲ್ಲಿ ಭಗವಂತನ ಪ್ರತ್ಯಕ್ಷ ಕಟಾಕ್ಷವು ಲಭಿಸಿದಂತೆ ಭಾಸವಾಗುತ್ತದೆ.

ಪ್ರಧಾನ ಸನ್ನಿಧಿಯ ಹಿಂಭಾಗದಲ್ಲಿರುವ ಲಕ್ಷ್ಮೀನರಸಿಂಹ ಸನ್ನಿಧಿಯಲ್ಲಿ ಶ್ರೀರಾಮಾನುಜ ಮತ್ತು ದೇಶಿಕರ ವಿಗ್ರಹಗಳಿವೆ

ದೇವಸ್ಥಾನದ ಪಕ್ಕದಲ್ಲಿ ಬ್ರಹ್ಮಕಪಾಲವೆಂಬ ಒಂದು ಬಂಡೆಯಿದೆ. ಇಲ್ಲಿ ಯಾತ್ರಾರ್ಥಿಗಳು ತಮ್ಮ ಪಿತೃಗಳಿಗೆ ತರ್ಪಣವನ್ನು ಪಿಂಡದಾನವನ್ನು ಮಾಡುತ್ತಾರೆ

ಭಾರತದ ವಿವಿಧ ಭಾಗಗಳಿಂದ ಭಕ್ತಾದಿಗಳು ಜಾತಿಮತ ಭೇದವಿಲ್ಲದೆ ವೈದಿಕ ಶ್ರದ್ಧೆಯಿಂದ ಇಲ್ಲಿ ಪೂಜೆಯನ್ನರ್ಪಿಸಿ ದೇವರ ಕಟಾಕ್ಷಕ್ಕೆ ಸಮವಾಗಿ ಭಾಗಿಗಳಾಗುತ್ತಾರೆ.

ಬದರಿಗೆ ವಿಶಾಲಪುರವೆಂಬ ಹೆಸರೂ ಉಂಟು. ಈ ಸ್ಥಳವು ಎಲ್ಲಕಡೆಗಳಿಂದಲೂ ಹಿಮದಿಂದ ಮುಚ್ಚಿದ ಪರ್ವತಗಳಿಂದ ಸುತ್ತುವರಿಯಲ್ಪಟ್ಟಿದೆ. ಎದುರುಗಡೆ ನರನಾರಾಯಣಪರ್ವತವೂ ಬಲಭಾಗದಲ್ಲಿ ನೀಲಕಂಠಪರ್ವತವೂ ಇವೆ.

ಈ ಕ್ಷೇತ್ರವು ಆರುತಿಂಗಳುಕಾಲ ಹಿಮದಿಂದ ಮುಚ್ಚಿರುವುದರಿಂದ ವರ್ಷದ ಆರುತಿಂಗಳು ಕಾಲ ಮಾತ್ರ ದರ್ಶನಕ್ಕೆ ಅವಕಾಶವಿದೆ, ಕಾರ್ತಿಕ ಮಾಸದಲ್ಲಿ ಮುಚ್ಚಿ ಅಕ್ಷತದಿಗೆಯಂದು ಪುನಃ ತೆರೆಯಲಾಗುವುದು. (ನವಂಬರ್ ತಿಂಗಳಿನಿಂದ ಮೇ ತಿಂಗಳಿನವರೆಗೆ ಮುಚ್ಚಿರುತ್ತದೆ) ಇಲ್ಲಿಂದ ಕೇದಾರನಾಥಕ್ಕೆ ಹೋಗಬಹುದು.



# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:


ಸಂಪಾದಕರು

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ–517507

ಚಿತ್ತೂರು ಜಿಲ್ಲೆ, ಆಂ. ಪ್ರ.

# ಶ್ರೀ ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.

## ವಿವಿಧ ಆರ್ಜಿತ ಉತ್ಸವಗಳ ದರ ವಿವರಣೆ

ವಿಶೇಷ ಪ್ರವೇಶ ರೂ 25–00
(ಸರ್ವದರ್ಶನ ಸಮಯದಲ್ಲಿ ಮಹಾದ್ವಾರದ ಬಳಿಯಲ್ಲಿ ಸರತಿಯಸಾಲಿನಲ್ಲಿ ಸೇರುವಿಕೆ)

### ಸೇವೆಗಳು

| | | |
|---|---|---|
| 1. | ಆಮಂತ್ರಣೋತ್ಸವ¹ | ರೂ 400 |
| 2. | ಅಭಿಷೇಕ* | ರೂ 500 |
| 3. | ಪುನುಗು* | ರೂ 200 |
| 4 | ಜಾಫ್ರಾ* | ರೂ 100 |
| 5. | ಕಸ್ತೂರಿ* | ರೂ 100 |
| 6. | ಸಹಸ್ರಕಲಶಾಭಿಷೇಕ | ರೂ 3000 |
| 7. | ತಿರುಪ್ಪಾವಡಾ² | ರೂ 6000 |
| 8. | ಕೋಯಿಲ್ ಆಳ್ವಾರ್ ತಿರುಮಂಜನ | ರೂ 3000 |
| 9 | ಮುಕುರ ಮಂಟಪದಲ್ಲಿ ಡೋಲೋತ್ಸವ² | ರೂ 1500 |
| 10. | ಸಹಸ್ರದೀಪಾಲಂಕಾರ ಸೇವೆ | ರೂ 2000 |

### ಉತ್ಸವಗಳು

| | |
|---|---|
| ವಸಂತೋತ್ಸವ | ರೂ 3000 |
| ಕಲ್ಯಾಣೋತ್ಸವ | ರೂ 2000 |
| ಬ್ರಹ್ಮೋತ್ಸವ | ರೂ 750 |
| ತೆಪ್ಪೋತ್ಸವ² | ರೂ 2500 |
| ಪವಿತ್ರೋತ್ಸವ | ರೂ 2500 |

### ವಾಹನಗಳು

ಬಂಗಾರದ ಗರುಡ, ಕಲ್ಪವೃಕ್ಷ, ಸೂರ್ಯಪ್ರಭ, ಸರ್ವಭೂಪಾಲ, ಪ್ರತಿ ಒಂದಕ್ಕೆ ರೂ 125

ಬೆಳ್ಳಿಯ ಗರುಡ, ಚಿಕ್ಕಶೇಷ, ಚಂದ್ರಪ್ರಭ, ಗಜ, ತುರಗ, ಹಂಸ, ಹನುಮಂತ ಪ್ರತಿ ಒಂದಕ್ಕೆ ರೂ 100

1. ಆಮಂತ್ರಣೋತ್ಸವಕ್ಕೆ ಇಬ್ಬರಿಗೆ ಮಾತ್ರ ಪ್ರವೇಶ.

* 2,3,4,5,6, ಸೇವೆಗಳಿಗೆ ಒಬ್ಬರಿಗೆ ಮಾತ್ರ ಪ್ರವೇಶ.

2. ಈ ಸೇವೆಗಳಲ್ಲಿ ಐದು ಗ್ರಾಂನ ಚಿನ್ನದ ಪದಕವನ್ನು ಬಹೂಕರಿಸಲಾಗುವುದು.

ವಿವರಗಳಿಗೆ: **ಪೇಷ್ಕಾರ್, ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ, ತಿರುಮಲೆ** ಇವರಿಗೆ ಬರೆಯಿರಿ ಅಥವಾ **ತಿರುಮಲೆಯ ವಿಜಯಾ ಬ್ಯಾಂಕಿನಲ್ಲಿ** ವಿಚಾರಿಸಿ

# ತಿರುಮಲೆ ತಿರುಪತಿಗಳಲ್ಲಿ ವಸತಿ ಸೌಲಭ್ಯ

### ತಿರುಮಲೆ

| | | |
|---|---|---|
| ವಿಶೇಷ ರೀತಿಯ ಕಾಟೇಜುಗಳು | ದಿನವೊಂದಕ್ಕೆ | ರೂ75–00 |
| ಟಿ.ಬಿ ಸಿ ಒಳಗಿನ ಕಾಟೇಜುಗಳು | ” | ರೂ 50–00 |
| ಎಸ್. ವಿ. ಅತಿಥಿಗೃಹ ತಿರುಮಲೆ | | |
| ಅ) ದೊಡ್ಡ ಕೋಣೆಗಳು | ,, | ರೂ 50–00 |
| ಆ) ಮಹಡಿಯ ಕೋಣೆಗಳು | ,, | ರೂ 40–00 |
| ಇ) ಕಿರಿಯ ಕೋಣೆಗಳು | ,, | ರೂ 35–00 |
| ಎಚ್. ಆರ್. ಜಿ. ಕಾಟೇಜು | ,, | ರೂ 150–00 |
| ಮದುವೆಯ ಹಾಲ್‌ಗಳು | | |
| ರೂಯಾ ಕಾಟೇಜು | ,, | ರೂ 80–00 |
| ಗೋಗಿನೇನಿ ಕಾಟೇಜು | ,, | ರೂ 80–00 |
| ಸಿ ಸಿ. ಕಾಟೇಜು | ,, | ರೂ 100–00 |
| ಎಸ್.ಎಂ.ಸಿ. ಪೂರ್ವ ನಂ. 9 | ,, | ರೂ 50–00 |
| ಎ.ಟಿ.ಸಿ. ನಂ. 39 | ,, | ರೂ 80–00 |
| ಶಂಖುಮಿಟ್ಟ ಕಾಟೇಜುಗಳು (ಪೂರ್ತಿ) | | ರೂ 20–00 |
| ಶೇಷಾದ್ರಿನಗರ ,, | ,, | ರೂ 20–00 |
| ಅಂಜನಾದ್ರಿನಗರ ,, | ,, | ರೂ 20–00 |
| ಗರುಡಾದ್ರಿನಗರ ,, | ,, | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ ಟಿ.ಡಿ. ತಿರುಮಲೆ

### ತಿರುಪತಿ

| | |
|---|---|
| ಶ್ರೀನಿವಾಸ ಸತ್ರ ಎರಡು ಹಾಸಿಗೆಗಳಕೋಣೆ | ರೂ 20–00 |
| ನಾಲ್ಕು ” | ರೂ 25–00 |
| ಒಂದು ” | ರೂ 15–00 |
| ಶ್ರೀ ಪದ್ಮಾವತಿ ಅತಿಥಿಗೃಹ | |
| ಹವಾನಿಯಂತ್ರಿತ 2 ಹಾಸಿಗೆಗಳ ಕೋಣೆ | ರೂ 50–00 |
| ,, ಒಂದು ಹಾಸಿಗೆಯ ಕೋಣೆ | ರೂ 30–00 |
| ಶ್ರೀ ವೆಂಕಟೇಶ್ವರ ಅತಿಥಿಗೃಹ | |
| ಎರಡು ಹಾಸಿಗೆಗಳ ಕೋಣೆ | ರೂ 20–00 |

ವಿವರಗಳಿಗೆ: ರಿಸೆಪ್ಷನ್ ಆಫೀಸರ್, ಟಿ.ಟಿ.ಡಿ. ತಿರುಪತಿ.

ತಿರುಮಲೆ–ತಿರುಪತಿಗಳಲ್ಲಿನ ವಸತಿಯನ್ನು ಕಾಯ್ದಿರಿಸಬಹುದು. ಆಯಾ ವಸತಿಸೌಕರ್ಯಕ್ಕೆ ಅನುಗುಣವಾದ ಹಣದ ಡಿ. ಡಿ. ಯನ್ನು ಕಳುಹಿಸುವಾಗ ಅಂಚೆ ವಿಳಾಸ ಹಾಗೂ ಅಪೇಕ್ಷಿತ ವಸತಿ ಸೌಕರ್ಯದ ವಿವರಗಳನ್ನು ಸ್ಪಷ್ಟವಾಗಿ ಇಂಗ್ಲೀಷಿನಲ್ಲಿ ಬರೆಯಿರಿ. ಅಪೇಕ್ಷಿತ ವಸತಿ ಸೌಕರ್ಯ ಲಭ್ಯವಿಲ್ಲದಾಗ ಇತರೆ ವಸತಿಯನ್ನು ಕಾಯ್ದಿರಿಸಿ ಹೆಚ್ಚಿನ ಹಣವನ್ನು ನೀವು ಇಲ್ಲಿ ಬಂದಾಗ ಹಿಂದಿರುಗಿಸಲಾಗುವುದು. ಕಾಯ್ದಿರಿಸಿದ ಬಗ್ಗೆ ಪತ್ರವನ್ನು ಕಳುಹಿಸಲಾಗುತ್ತದೆ, ಅದನ್ನು ತೆಗೆದುಕೊಂಡೇ ತಿರುಪತಿ; ತಿರುಮಲೆಗಳಿಗೆ ಬನ್ನಿರಿ. ಅಂಚೆಯಲ್ಲಿನ ವಿಳಂಬಕ್ಕೆ ತಿ.ತಿ.ದೇ. ಹೊಣೆಯಲ್ಲ. ಮೀಸಲಾತಿಯ ಹಕ್ಕು ತಿ.ತಿ.ದೇ. ಗಳದ್ದು.

ತಿರುಮಲೆ ತಿರುಪತಿ ದೇವಸ್ಥಾನ.

( ೩ ನೇ ಪುಟದಿಂದ )

ಅಚಾರವಿಲ್ಲದ ನಾಲಿಗೆ !
ನಿನ್ನ ನೀಚಬುದ್ಧಿಯ ಬಿಡು ನಾಲಿಗೆ ।
ವಿಚಾರವಿಲ್ಲದೆ ಪರರ ದೂಷಿಸುವುದಕ್ಕೆ
ಚಾಚಿಕೊಂಡಿರುವಂಥ ನಾಲಿಗೆ !
ಚಾಡಿ ಹೇಳಲು ಬೇಡ ನಾಲಿಗೆ ।
ನಿನ್ನ ಬೇಡಿಕೊಂಬೆನು ನಾಲಿಗೆ ।
ರೂಢಿಗೊಡೆಯ ಶ್ರೀರಾಮನ ನಾಮವ ।
ಪಾಡುತಲಿರು ಕಂಡ್ಯ ನಾಲಿಗೆ ।

– ಎಂದು ನಾಲಿಗೆಗೆ ಅರ್ಥಾತ್ ಕಂಡಂತೆ ವದಂತಿ ಹಬ್ಬಿಸಬಲ್ಲಂತವರ ನಾಲಿಗೆಗೆ ಬುದ್ಧಿವಾದ ಹೇಳಿದ್ದಾರೆ ದಾಸರು.

## ಗೃಹಿಣಿಯ ಗೋಳು :

ಈಗಿನ ಕಾಲದ ಕನ್ಯಾಮಣಿಗಳು ಎಂಥ ಗಂಡನನ್ನು ಬಯಸುತ್ತಾರೆ ಮತ್ತು ಎಂಥ ಗಂಡನನ್ನು ಒಲ್ಲೆ ಎನ್ನುತ್ತಾರೆ ಎನ್ನುವುದು ಇಲ್ಲಿ ಅಪ್ರಸ್ತುತ! ಆದರೆ ದಾಸರು ಸಂದರ್ಶಿಸಿದ ಓರ್ವ ವೈದಿಕ ಬ್ರಾಹ್ಮಣನ ಗೃಹಿಣಿ ಹೇಳಿದ ಮಾತುಗಳೇನು ಗೊತ್ತೆ ?

ಒಲ್ಲೆನೆ ವೈದಿಕ ಗಂಡನ ।
ನಾನೆಲ್ಲಾದರೂ ನೀರ ಧುಮುಕುವೆನಮ್ಮ ।
ಉಟ್ಟೆನೆಂದರೆ ಇಲ್ಲ ತೊಟ್ಟೆನೆಂದರೆ ಇಲ್ಲ ।
ಕೆಟ್ಟಸೀರೆಯ ನಾನುಡಲಾರನೆ ।
ಹಿಟ್ಟು ತೊಳಸಿ ಎನ್ನ ರಟ್ಟೆಲ್ಲ ನೊಂದವು ।
ಎಷ್ಟೆಂತ ಹೇಳಲಿ ಕಷ್ಟದ ಒಗೆತನ ।
ಕೃಷ್ಣಾಜಿನವನ್ನು ರಟ್ಟೇಲಿ ಹಾಕಿಕೊಂಡು ।
ಬೆಟ್ಟೇಲಿ ಗಿಂಡಿಯ ಹಿಡಿದಿಹನೇ ।
ದಿಟ್ಟತನದಲಿ ನಾನೆದುರಿಗೆ ಹೋದರೆ ।
ದೃಷ್ಟಿಯಿಂದಲಿ ಎನ್ನ ನೋಡನಮ್ಮ ।
ನಿನ್ನಾಣೆ ಹುಸಿಯಲ್ಲ । ಬಿನ್ನಾಣದ ಮಾತಿಲ್ಲ
ಕಣ್ಣು ಸನ್ನೆಯಂತೂ ಮೊದಲೇ ಇಲ್ಲ ।

ದಾಸರ ಹಾಸ್ಯ ಪ್ರಜ್ಞೆ ಇಲ್ಲಿ ಉಜ್ವಲಿಸಿದೆ ಬಡ ಬ್ರಾಹ್ಮಣ ಗೃಹಿಣಿಯ ದೈನಂದಿನ ಬಾಳಿನ ಗೋಳಿನ ಚಿತ್ರವನ್ನು ಕೊಡುವುದರೊಂದಿಗೆ ಒಂದು ಹೆಣ್ಣು ತನ್ನ ಗಂಡನಿಂದ ಏನು ಬಯಸುವಳು ಎಂಬುದನ್ನು ಕೊನೆಯ ಎರಡು ಸಾಲಿನಲ್ಲಿ ಸೊಗಸಾಗಿ ಸೆರೆಹಿಡಿದ್ದಾರೆ

ಪುರಂದರದಾಸರು ಎಂದಿನಂತೆ ಒಂದುದಿನ ಜೋಳಿಗೆ ಹಿಡಿದು ಕೊಂಡು ಮನೆಮನೆಗೆ ನಡೆದಿದ್ದಾರೆ ಗೋಪಾಳಕ್ಕೆಂದು ಆಗ ವಿವಿಧ ಮನೋಭಾವದ ಜನರನ್ನು ಸಂಧಿಸುತ್ತಿದ್ದರು ದಾಸರು. ಒಂದು ಮನೆಯವರು ಗೋಪಾಳ ಹಾಕಿದರೆ ಇನ್ನೊಂದು ಮನೆಯವರು ಮುಂದಕ್ಕೆ ಹೋಗೆನ್ನಬಹುದು. ಒಂದು ಮನೆಯೊಡತಿ ದಾಸರ ಕಂಪೇತಿ ತಪಕ್ಕೆ ಬೇಸತ್ತು, ಅವರು ಇನ್ನೂ ಹತ್ತುದಿನ ತನ್ನ ಮನೆಯ ಕಡೆಗೆ ಹಾಯದಂತೆ ಹತ್ತಾರು ಕಾರಣಗಳನ್ನು ಕೊಟ್ಟು 'ಮುಂದಕ್ಕೆ ಹೋಗಯ್ಯಾ' ಎಂದು ಹೇಳಿಕಳಿಸಿದಳು. ಆ ಕಾರಣಗಳು ,

ಇಕ್ಕಲಾರೆ ಕೈ ಎಂಜಲು ।
ಮಕ್ಕಳು ಅಳುತಾರೆ ಹೋಗೋ ದಾಸಯ್ಯ ! ।
ಮನೆಯ ಸಾರಿಸುತೇನೆ ಮಡಕ ತೊಳೆಯುತ್ತೇನೆ ।
ಮನೆಯೊಳಗಾರಿಲ್ಲ ಹೋಗೋ ದಾಸಯ್ಯ ।
ತನಯರು ಅಳುತಾರೆ ನಿನಗೇನು ಕಾಟವು ।
ಕ್ಷಣಹೊತ್ತು ನಿಲ್ಲದೆ ಹೋಗೋ ದಾಸಯ್ಯ ।
ಅಟ್ಟದ ಮೇಲಣ ಅಕ್ಕಿ ತೆಗೆಯಬೇಕು ।
ಹೊಟ್ಟೆ ನೋಯುತಲಿದೆ ಹೋಗೋ ದಾಸಯ್ಯ ।
ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ !
ನಿಷ್ಠುರ ಮಾಡದೇ ಹೋಗೋ ದಾಸಯ್ಯ ।
ವೀಸದ ಕಾಸಿಗೆ ಪವಸವ ನಾ ತಂದೆ ।
ಕೂಸಿಗೆ ಸಾಲದು ಹೋಗೋ ದಾಸಯ್ಯ ।

ಎಂದು ತಾರಮ್ಮಯ್ಯ ಮಾಡಿ ಕಳಿಸಿ ಬಿಟ್ಟಿದ್ದಾಳೆ. ಆ ಗಟ್ಟಿಗ ಗೃಹಿಣಿ ನಮ್ಮ ದಾಸರಿಗೆ

## ಹರಿಯೊಂದಿಗೆ ಹುಸಿಮುನಿಸು :

ಪುರಂದರದಾಸರ ವ್ಯಂಗದ ಬಾಣ ಅವರ ನೆಚ್ಚಿನ ಶ್ರೀಹರಿಯನ್ನೂ ತಾಕದೆ ಬಿಟ್ಟಿಲ್ಲ. ಈ ಹರಿ ನಂಬಿಕೆಗೆ ಅರ್ಹನಲ್ಲ ; ಇವನನ್ನು ನಂಬಿ ಕುಳಿತರೆ ಏನಾಗುವುದೋ ಹೇಳಲು ಬಾರದು. ಈ ಮಾತನ್ನು ಉದಾಹರಣೆ ಸಹಿತವಾಗಿ ಹೀಗೆ ಹಾಡಿ ತೋರಿಸಿದ್ದಾರೆ ದಾಸರು.

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ।
ತೋರು ಈ ಜಗದೊಳಗೆ ಒಬ್ಬರನು ಕಾಣೆ ।
ಕರಪತ್ರದಿಂದ ತಾಮ್ರಧ್ವಜನ ತಂದೆಯ
ಕೊರಳ ಕೊಯ್ಸಿದೆ ನೀನು ಕುಂದಿಲ್ಲದೆ ।
ಮುರುಳನಂದದಿ ಪೋಗಿ ಭೃಗು ಮುನಿಯ
ಕಣ್ಣೊಡೆದೆ ।
ಅರಿತು ತ್ರಿಪುರಾಸುರರ ಹೆಂಡಿರನು ಬೆರೆದೆ ।
ಕಲಹ ಬಾರದ್ದಕಾಗಿ ಕರ್ಣನನು ನೀ ಕೊಂದೆ ।
ಸುಲಭದಲಿ ಕೌರವನ ಮನೆಯ ಮುರಿದೆ ।
ನೆಲವ ಬೇಡುತ ಪೋಗಿ ಬಲಿಯ ತನುವನು
ತುಳಿದೆ ।
ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ ।
ದೊರೆ ಪುರಂದರವಿಠಲ ನಿನ್ನನು ನಂಬಿದರೆ ।
ತಿರುಪೆಯೂ ಹುಟ್ಟಲೊಲ್ಲದು ಕೇಳೋ
ಹರಿಯೇ

ಹೀಗೆ ನಂಬಿದವರನ್ನು ನಡುನೀರಿನಲ್ಲಿ ಕೈ ಬಿಡುವ ಈ ಚೆಲುವ ರಂಗನಾಥನು ತನ್ನ ಸ್ವಂತ ಕ್ಕಾದರೂ ಸ್ಥಿತಿವಂತನಾಗಿದ್ದಾನೆಯೇ ? ಒಂದು ಉತ್ತಮ ನೆಲೆಯನ್ನು ಕಂಡುಕೊಂಡಿದ್ದಾನೆಯೇ ? ತಾನಾದರೂ ಒಂದು ನಿಯಮ ನಿಷ್ಠೆ ಪಾಲಿಸಿ ಕೊಂಡಿದ್ದಾನೆಯೇ ? 'ಇಲ್ಲವೇ ಇಲ್ಲ' ಎನ್ನು ತ್ತಾರೆ ದಾಸರು ಈ ಹಾಡಿನಲ್ಲಿ

ಏತರ ಚೆಲುವ ರಂಗಯ್ಯ ।
ಹರಿಯೆಂಬ ಮಾತಿಗೆ ಮರುಳಾದೆನಲ್ಲದೆ ।
ದೇಶಕೋಶಗಳಿಲ್ಲೆಡೆ ತಾ ಕ್ಷೀರಜ ।
ರಾಶಿಯೊಳಗೆ ಮನೆ ಕಟ್ಟುವನೆ ।
ಹಾಸುವುದಕ್ಕೆ ಹಾಸಿಗೆಯಿಲ್ಲೆಡೆ ತಾ ।
ಶೇಷನ ಬೆನ್ನಲಿ ಮಲಗುವನೇ ರಂಗ ।
ಬುದ್ಧಿಯ ಪೇಳುವ ಪಿತನಿಲ್ಲೆಡೆ ಬೆಣ್ಣೆ ।
ಕದ್ದು ಚೋರನೆಂದೆನಿಸುವನ ।
ಮಡದಿಯು ಇಲ್ಲೆಡೆ ಅಡವಿಯೊಳಾಡುವ ।
ಹುಡುಗಿಯರ ಸಂಗ ಮಾಡುವನೇ ರಂಗ ।
ಪತಿಯಿಲ್ಲೆಡೆ ರಕ್ಷಕ ಪತಿಯೆಡೆಗೈದು ತಾ ।
ಕ್ಷಿತಿಯ ದಾನವನು ಬೇಡುವನೇ ।

ತಮ್ಮ ಪ್ರೀತಿಯ ಶ್ರೀಹರಿಯ ಒಂದೊಂದೇ ತಪ್ಪು ಗಳನ್ನು ಕೆದಕಿ ನೋಡಿದ ದಾಸರು ಅಷ್ಟಕ್ಕೆ ಸುಮ್ಮ ನಾಗುವುದಿಲ್ಲ ತಾವಿಷ್ಟು ಹಂಗಿಸಿದರೂ, ಮತ್ತೆ ತಮ್ಮ ಕಣ್ಣು ಮುಂದೆ ನಗುಮೊಗದಿಂದ ನಿಂತ ತುಂಟ ಕೃಷ್ಣನ ರೂಪಲಾವಣ್ಯವನ್ನು ಅಪಹಾಸ್ಯ ಮಾಡಿ, ಇವನಿಗೇಕೆ ಇಷ್ಟೆಲ್ಲ ಶೃಂಗಾರ, ಬಂಗಾರ ಎಂದು ಪ್ರಶ್ನಿಸಿದ್ದಾರೆ ಈ ಹಾಡಿನಲ್ಲಿ·

"ಇವಗೇಕೆ ಶೃಂಗಾರ । ಇವಗೇಕೆ ಬಂಗಾರ ।
ಕಾಡ ಕಾಡಿಯುಂಡೆ ಪೋಲುವ ದೇಹಕ್ಕೆ ।
ನೀರೊಳಗೆ ಮುಳುಗಿರುವಗೆ ಪರಿಮಳ
ಗಂಧವೇಕೆ ।
ಭೂಮಿಪೊತ್ತವಗೆ ಪನ್ನೀರು ಏಕೆ ।
ಕೋರೆ ದಾಡೆಯು ಘೋರ ಮುಖಕೇಕೆ ಕನ್ನಡಿ
ಕರುಳಹಾರ ಧರಿಸಿದವಗೆ ದಾಂಪತ್ಯವೇಕೆ ।
ತಲೆತಾಯ ತರಿದವಗೆ ಮಾಯಾಪಿಯೇಕೆ ।
ಚೇಲಾರುವಡು ಉಟ್ಟವಗೇಕೆ ಪೀತಾಂಬರ ।
ಪಾಲ ಕದ್ದು ಕುಡಿದವಗೆ ಕುಸುಮ ಕೇಸರಿ
ಯೇಕೆ ।
ಬತ್ತಲೆ ನಿಂತಿಪವಗೆ ಕಸ್ತೂರಿ ತಿಲಕವೇಕೆ :

ವಿಷ್ಣುವಿನ ಒಂದೊಂದು ಅವತಾರವನ್ನು ಹೀಗೆ ವಿಡಂಬನೆ ಮಾಡುವುದರ ಮೂಲಕ ದಾಸರು ಈ ಹೊಲಸು ಮೈಯಿನ ಕೇಶವ ಶೃಂಗಾರ ಮಾಡಿಸಿ ಕೊಳ್ಳುವುದಕ್ಕೇ ನಾಲಾಯಕ್ಕು ಎಂದು ಸಾರು ತ್ತಾರೆ ಪರಮಾತ್ಮನ ಬಿಡಿಸಲಾಗದ ಒಗಟಿ ನಂತಹ ಚರ್ಯೆ ದಾಸರ ಈ ಎಲ್ಲ ಹುಸಿಮುನಿ ಸಿಗೆ ಕಾರಣವಾಗಿರಬಹುದು ಇಷ್ಟಾದರೂ ದಾಸರು ಕೊನೆಗೆ ಮೊರೆ ಹೋಗಬೇಕಾದದ್ದು ಆ ದೇವನಿಗೆ ತಾನೆ ?

ಯಾಕೆ ನಿರ್ದಯನಾದೆ ಎಲೋ ದೇವನೆ ।
ಶ್ರೀಕಾಂತ ಎನ ಮೇಲೆ ಎಳ್ಳಷ್ಟು ದಯವಿಲ್ಲ ।
ಕಂಗೆಟ್ಟು ಕಂಬದಲಿ ಒಡೆದು ಬಳಲಿ ಬಂದು ।
ಹಿಂಗದೆ ಪ್ರಹ್ಲಾದನಪ್ಪಿಕೊಂಡೆ ।
ಮಂಗಳಪದವಿತ್ತು ಸುಪ್ಪಿಸಿದೆ ಅವನಿಗೆ ।
ಬಂಗಾರವೆಷ್ಟು ಕೊಟ್ಟನು ಪೇಳೋ ಹರಿಯೇ ।
ಭರದಿಂದ ನೀ ಬಂದು ಕರಿಯನುದ್ಧರಿಸಿದೆ ।
ಕರಿರಾಜ ಎಷ್ಟು ಕನಕವಕೊಟ್ಟ ಹರಿಯೇ ।
ಅಜಮಿಳನು ಅಣ್ಣನೇ, ವಿಭೀಷಣನು
ತಮ್ಮನೇ ।
ನಿಜದಿ ರುಕ್ಮಾಂಗದನು ನಿನ್ನ ಮೊಮ್ಮಗನೇ ।
ಭಜನೆಗನರೇ ಹಿತರೇ, ನಾ ನಿನಗೆ ಅನ್ಯನೆ ।
ತ್ರಿಜಗಪತಿ ಸಲಹೆನ್ನ ಪುರಂದರ ವಿಠಲ ।

ಎಂದು ಕೊನೆಗೆ ಶ್ರೀಹರಿಯನ್ನೇ ಮೊರೆಹೊಕ್ಕು ಪ್ರಾರ್ಥಿಸುತ್ತಾರೆ ಅಷ್ಟೇ ಅಲ್ಲ, ಭಕ್ತರನ್ನೆಲ್ಲ ಸಮಾನ ದೃಷ್ಟಿಯಿಂದ ಕಾಣಬೇಕು, ಒಬ್ಬರಿಗೆ ಸುಣ್ಣ ಮತ್ತೊಬ್ಬರಿಗೆ ಬೆಣ್ಣೆ — ಈ ರೀತಿ ಸರಿ ಯಲ್ಲ ಎಂಬ ನೇರವಾದ ಎಚ್ಚರಿಕೆಯನ್ನೂ ಕೊಡುತ್ತಾರೆ.

ಇದು ಪುರಂದರದಾಸರು ದೇವರನ್ನು ವಿಡಂಬಿ ಸಿದ ಬಗೆ. ದಾಸರಿಗೆ ದೇವರಲ್ಲಿ ಅಚಲವಾದ ಭಕ್ತಿ ನಂಬಿಕೆ ಇರುವಂತೆಯೇ, ಆಗಾಗ ಆ ದೇವನ ಲೀಲೆಗಳನ್ನು ಕೆದಕಿ ನೋಡಿ, ಅವನನ್ನು ಕೆಣಕುವ ಚಪಲತೆಯೂ ಇದೆ! ಭಗವಂತನನ್ನು ಭಕ್ತಿ ಯಿಂದ ಮಾತ್ರವಲ್ಲ; ಸಮಯ ಬಂದಾಗ ಜಗಳ ವಾಡಿಯೂ ದಾಟಿಗೆ ತರುವ ರೀತಿ ಗೊತ್ತು ದಾಸರಿಗೆ.

ಹೀಗೆ ತಮ್ಮ ಅಸಂಖ್ಯಾತ ಹಾಡುಗಳಲ್ಲಿ ತಾವು ಕಂಡುದನ್ನು, ಅನುಭವಿಸಿದುದನ್ನು, ಅನಿಸಿ ದ್ದನ್ನು ತಮ್ಮ ಹಾಸ್ಯಮಿಶ್ರಿತ ವಿಡಂಬನೆಯ ಒರೆಗ ಲ್ಲಿಗೆ ಹಚ್ಚಿನೋಡಿದ ದಾಸರಿಗೂ ಒಮ್ಮೆ ನಗೆಯು ಬಂದಿತಂತೆ ! ಯಾಕೆ ನೋಡೋಣವೆ?

ನಗೆಯು ಬರುತಿದೆ ಎನಗೆ ನಗೆಯು
ಬರುತಿದೆ ।
ಜಗದೊಳಿರುವ ಮನುಜರೆಲ್ಲ ।
ಹಗರಣವ ಮಾಡುವುದ ಕಂಡು ।
ಕಾಮಕ್ರೋಧ ಮನದೊಳಿಟ್ಟು ।
ತಾನು ವಿಷಯ ಪುಂಜನಾಗಿ ।
ಸ್ವಾಮಿ ಪುರಂದರವಿಠಲನ ನಾಮ ನೆನೆಯದ
ವರ ಕಂಡು ।

ಇದು ತಮಗೆ ನಗೆಬರುವುದಕ್ಕೆ ಅವರು ತಿಳಿಸಿದ ಕಾರಣ.

ಪುರಂದರದಾಸರು ಅತ್ಯುತ್ತಮ ವಿಡಂಬನ ಕಾರರು ಅವರ ವಿಡಂಬನೆಯ ಹಿಂದೆ ಕಾಣು ವುದು ಸಾಮಾಜಿಕ ಕಳಕಳಿ. ನವುರಾದ ಆದರೂ ಚಾಟಿಯೇಟಿನಂತಹ ಮಾತುಗಳಿಂದ ವೈಚಾರಿಕ ಸಂಗತಿಗಳನ್ನು ದಾಸರು ಬಿತ್ತಿದ್ದಾರೆ. ★

ಕರ್ನಾಟಕದ ಕರಾವಳಿ ಜಿಲ್ಲೆಯಾದ ದಕ್ಷಿಣ ಕನ್ನಡದಲ್ಲಿ ಪ್ರಾಚೀನ ಕಾಲದಿಂದಲೂ ತಿರುಪತಿ ವೆಂಕಟರಮಣನ ಮಹಿಮೆ ಪ್ರಜಲಿತವಾಗಿತ್ತು. ಕ್ರಿ. ಶ. 1480-1600 ತನಕ ಬಾಳಿ ಸಶರೀರರಾಗಿ ವೃಂದಾವನಸ್ಥರಾದ ಉಡುಪಿಯ ಶ್ರೀ ವಾದಿರಾಜ ಸ್ವಾಮಿಗಳು, ತಮ್ಮ ತೀರ್ಥಪ್ರಬಂಧವೆಂಬ ಕಾವ್ಯದಲ್ಲಿ. ತಿರುಪತಿ ಶ್ರೀನಿವಾಸದೇವರನ್ನು ಭಕ್ತಿಯಿಂದ ವರ್ಣಿಸಿ, ಸ್ತುತಿಮಾಡಿರುವರು. ಮುಂದೆ ಮೂಲಿಕೆಯ ಮಟ್ಟಿ ವಾಸುದೇವ ಪ್ರಭು (1805-1865), ಕವಿ ರಾಮಕೃಷ್ಣ (1832–1910), ಮಾವಂಜೆ ಲಕ್ಷ್ಮೀನಾರಾಯಣಪ್ಪ (1854–1924) ಮೊದಲಾದವರು ಭಕ್ತ ಕವಿಗಳಾಗಿ ನೂರಾರು ಹಾಡುಗಳಿಂದ ವೆಂಕಟರಮಣನ ಮಹಿಮಾತಿಶಯಗಳನ್ನು ಬಣ್ಣಿಸಿರುವರು. ಕವಿ ರಾಮಕೃಷ್ಣನು 'ಪದ್ಮಾವತೀ ಕಲ್ಯಾಣ 'ವೆಂಬ ಕಾವ್ಯವನ್ನೇ ವಿರಚಿಸಿರುವನು. ಈ ಪ್ರದೇಶದ ಹಿರಿಮೆಯ ತಲೆಯಾದ ಯಕ್ಷಗಾನದ ಪ್ರಸಂಗ ಸಾಹಿತ್ಯವನ್ನು ಬೆಳಗಿಸಿದ ಕವಿಗಳಲ್ಲಿ ತಿರುಪತಿಯ ಭಕ್ತರು ಹಲವರಿದ್ದಾರೆ. ಇವರೆಲ್ಲರಂತೆ ತಿರುಪತಿಯ ಭಕ್ತನಾಗಿದ್ದು, ಪದ್ಯರೂಪದಲ್ಲಿ "ವೆಂಕಟಗಿರಿಮಹಾತ್ಮ್ಯ' ಎಂಬ ಕನ್ನಡ ಕಾವ್ಯಬರೆದವನು ಮಯ್ಯವಟಿ ವೆಂಕಟರಮಣಯ್ಯ.

ಈತನು ಬರೆದಿರುವ ಕಾವ್ಯಗಳಿಂದಲೂ, ಈತನ ಕುರಿತು ಅಚ್ಚಾದ ಲೇಖನಗಳಿಂದಲೂ ಈತನ ಜೀವನ ವಿಚಾರಗಳನ್ನು ತಿಳಿಯಲೆಡೆಯಿದೆ. ದ. ಕ. ಜಿಲ್ಲೆಯ ಸುರತ್ಕಲ್ಲಿನ ಸಮೀಪದ ಪಣಂಬೂರು ಈತನ ಹಟ್ಟೂರು. ತಂದೆ ಊರ ಪಟೇಲರಾಗಿದ್ದರು. ವಿಶ್ವಾಮಿತ್ರ ಗೋತ್ರದ ತಿಮ್ಮಪ್ಪಯ್ಯ ಎಂದು ಹೆಸರು. ಮಯ್ಯರ (ಕುಲನಾಮ) ಪಾಡಿ ಎಂಬ ಸ್ಥಳವೇ ಮಯ್ಯವಟಿ ಎಂದು ನಾಮಾಂತರವಾಗಿದೆ. ಕಾಸರಗೋಡು ತಾಲೂಕಿನ ಮಾಯಿಪ್ಪಾಡಿ ಅರಮನೆಯಲ್ಲಿ ಶಾನುಭೋಗ ವೃತ್ತಿಯಲ್ಲಿದ್ದನು. ಈತನು ಬದುಕಿದ್ದ ಜೀವನಕಾಲದಲ್ಲಿ (1860–1940) ಆರಂಭದ ಭಾಗವನ್ನು, ಮಾಯಿಪ್ಪಾಡಿಯಲ್ಲಿ ಕಳೆದರೂ, ಉತ್ತರಾರ್ಧವನ್ನು ಸ್ವಗ್ರಾಮದಲ್ಲಿ ಕಳೆದಂತೆ ತಿಳಿದುಬರುತ್ತದೆ. ಈತನು ಕೋಟೇ




ಶ್ವರ ಬ್ರಾಹ್ಮಣನಾಗಿದ್ದನು. ದುರದೃಷ್ಟದಿಂದ ಸಂತಾನಭಾಗ್ಯವನ್ನು ಪಡೆದಿರಲಿಲ್ಲ ಈತನು ಪ್ರಹ್ಲಾದಚರಿತ್ರೆ, ಮದಾಲಸಾ ಕಲ್ಯಾಣ, (ಪ್ರಕಟವಾಗಿವೆ) ಮತ್ತು ಶೂರಪದ್ಮಾಸುರಕಾಳಗ (ಅಪ್ರಕಟಿತ) ಗಳೆಂಬ ಯಕ್ಷಗಾನ ಕೃತಿಗಳನ್ನೂ. ಕಾವೇರಿ ಮಹಾತ್ಮ್ಯ (ಅಪ್ರಕಟಿತ) ವೆಂಕಟಗಿರಿ ಮಹಾತ್ಮ್ಯ, ಮತ್ತು ಅನಂತವ್ರತಕತೆಗಳೆಂಬ ಷಟ್ಪದಿ ಕಾವ್ಯಗಳನ್ನೂ, ಸತ್ಯನಾರಾಯಣ ಕತೆಯೆಂಬ ಹಾಡುಗಬ್ಬವನ್ನೂ ಬರೆದಿರುವನು ತನ್ನ ಎಲ್ಲಾ ಕೃತಿಗಳಲ್ಲಿಯೂ ನಾಂದರ್ಭಿಕವಾಗಿ ತಿರುಪತಿ ವೆಂಕಟೇಶನನ್ನು ನೆನೆದಿರುವನು. ವೆಂಕಟಗಿರಿ ಮಹಾತ್ಮ್ಯಯಲ್ಲಿ ಸಂಪೂರ್ಣವಾಗಿ ವೆಂಕಟರಮಣನ ಮಹಿಮಾತಿಶಯವನ್ನು ಭಕ್ತಿಪೂರ್ವಕವಾಗಿ ವಿಸ್ತರಿಸಿರುವನು.

ಈ ಕಾವ್ಯವು ಭಾಮಿನಿ ಷಟ್ಪದಿಯಲ್ಲಿದೆ. ತನ್ನ ಕಾವ್ಯವನ್ನು "ವೆಂಕಟೇಶನ ಚರಿತವಿದು" ಎಂದು ಪ್ರಸ್ತಾವನೆಯಲ್ಲಿ ಹೇಳಿರುವನು. ಅದೇ ರೀತಿ "ಮಿತ್ರಭಾವ ದೊಳಿವರ ಸರ್ವಾಧಿಕಾರಮನಿತ್ತಿಹೆನು ಚಿತ್ತದನುರಾಗದಿಂ ದ್ವಿಜಕುಲಸ | ಮುತ್ತನ್ನ ಕುಳವಿಗ್ರಾಮದೊಳಿರ್ಪ ರಾಮಶರ್ಮಂಗೆ ತಾನು ಚಿತದಿಂದ" ಎಂದಿರುವನು. ಇದರಿಂದ ಈ ಕಾವ್ಯರಚನೆಯಲ್ಲಿ ಯಾವದೇ ಆರ್ಥಿಕ ಲಾಭದ ಉದ್ದೇಶವಿದ್ದಿಲ್ಲವೆಂದು ವಿಧಿತವಾಗುತ್ತದೆ. ಇದರಲ್ಲಿ ಪೀಠಿಕಾಸಂಧಿಯೂ ಸೇರಿ ಹದಿಮೂರು ಸಂಧಿಗಳಲ್ಲಿ 536 ಪದ್ಯಗಳಿವೆ. ನಮಗೆ ದೊರೆತ ಪ್ರತಿ ಅಸಮಗ್ರವಾಗಿದ್ದು, ಇನ್ನೂ ಕೆಲವು ಪದ್ಯಗಳಿದ್ದಿರಬಹುದು. ಪೀಠಿಕಾಸಂಧಿಯಲ್ಲಿ ಲಕ್ಷ್ಮೀ, ಸರಸ್ವತಿ, ವಿಷ್ಣು, ಗಣಪತಿ, ದಿಕ್ಪಾಲಕಾದಿಗಳನ್ನು ನೆನೆದಿರುವನು. ಕತೆಯನ್ನು ಜನಕಚಕ್ರವರ್ತಿಗೆ,

**ಶ್ರೀ ಪು. ಶ್ರೀನಿವಾಸ ಭಟ್ಟ**

ಅವನ ಪುರೋಹಿತನಾಗಿದ್ದ ಶತಾನಂದ ಮುನಿಯು ಹೇಳಿದಂತೆ ಹೆಣೆಯಲಾಗಿದೆ. 2-3 ನೇ ಸಂಧಿಗಳಲ್ಲಿ, ತಿರುಪತಿಗೆ ಅಂಜನಾದ್ರಿ. ಶೇಷಾದ್ರಿ. ವೃಷಭಾದ್ರಿ ಮತ್ತು ವೆಂಕಟಗಿರಿ ಎಂಬ ನಾಮಾಂಕಿತಗಳು ಉಂಟಾಗಲು ಕಾರಣಗಳನ್ನು ವಿವರಿಸಲಾಗಿದೆ ಇವುಗಳು ಬೇರೆ ಕಡೆ ಹೇಳಿರುವ ಕತೆಗಳೇ ಆಗಿವೆ. ಮುಂದಿನ ಸಂಧಿಗಳಲ್ಲಿ ಪದ್ಮಾವತೀ ಕಲ್ಯಾಣದ ಕತೆಯಿದೆ. ಈ ಕತೆಗಳಲ್ಲಿ ಹೊಸತನವೇನೂ ಇಲ್ಲವಾದರೂ, ಸರಳವಾದ ಪದ್ಯಗಳೇ ಈ ಕಾವ್ಯದ ಜನಪ್ರಿಯತೆಗೆ ಮೂಲಸಾಧನವೆನ್ನಬಹುದು. ಇದರಲ್ಲಿರುವ ಜನಕ ಚಕ್ರವರ್ತಿಯ ರಾಜ್ಯದ ವರ್ಣನೆ ಹೀಗಿದೆ :–

ಹೊತ್ತು ಹೊತ್ತಿಗೆ ಜಪವು ನೇಮಾ
ದಿತ್ಯವಂದನೆ ವಿಪುಲ ಪೂಜೆದ್ವಿ |
ಜೋತ್ತಮರ ಸತ್ಕಾರ ಭೋಜನ ದಾನ
ದಕ್ಷಿಣೆಯು ||
ಮತ್ತೆ ವೇದಾಧ್ಯಯನ ನಿರತದಿ |
ಉತ್ತಮರ ಕೂಡಾಟವೆಂಬಿವು |
ನಿತ್ಯವಿಧಿಯಾಗಿಹುದು ಜನಕೇಂದ್ರ
ಕ್ಷಿತೀಶಂಗೆ. (೨-೮)

ಅದೇ ರೀತಿ ಪುತ್ರರಿಲ್ಲದ ಆಕಾಶರಾಜನ ದುಃಖವನ್ನು,

ಮಕ್ಕಳಿಲ್ಲದ ಗೃಹದಿ ಭಿಕ್ಷೆಯ |
ನಿಕ್ಕದರೆ ಬೇಡೆಂದು ಬೇಡುವ |
ದಕ್ಕೆ ಬಂದವರೆಲ್ಲ ಪೋಪರು ರಿಕ್ತ
ಹಸ್ತದಲಿ ||
ಅಕ್ಕಟಾ ಭಿಕ್ಷುಕರ ಮಾತಿನ |
ನೊಕ್ಕನಿಲ್ಲಿಸಿ ಬಿಡುವೆನೆಂದರೆ |
ರಕ್ಕಸಾಂತಕ ಕೊಡದೆ ಪೋದನೆಯೆನಗೆ
ಪುತ್ರರನು || (೬-೧೨)

ಎಂದು ಬಣ್ಣಿಸಿರುವನು. ಪ್ರತಿಸಂಧಿಯ ಕೊನೆಯಲ್ಲಿ ವಂಕಟೇಶನನ್ನು ಭಕ್ತಿಯಿಂದ ನೆನೆದಿರುವನು. ಛಂದೋಬದ್ಧ ಪದ್ಯಕಾವ್ಯಗಳು ಜನಪ್ರಿಯತೆಯನ್ನು ಕಳೆದುಕೊಳ್ಳಲಾರಂಭಿಸಿ, ಹೊಸಗನ್ನಡದ ಮುಂಗೋಳಿ ಕೂಗಿದ ಸಂಧಿಕಾಲದಲ್ಲಿ, ಯಾವುದೇ ಪ್ರಚಾರ, ದ್ರವ್ಯಾರ್ಜನೆಗಳ ಉದ್ದೇಶವಿಲ್ಲದೆ, ಭಕ್ತಿಭಾವದಿಂದ ಸರಸ, ಸರಳ, ಕೃತಿಯೊಂದನ್ನು ಬರೆದ ಕವಿಯು ಧನ್ಯನೇಸರಿ.

———

# ಶ್ರೀ ವೇಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೇಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಮತ್ತಿತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಆರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು· ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಆರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾ ಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ
  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯುಗಳ ದರಗಳು ಅಸಹಜವಾಗಿ ಏಂದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಸಲಾಗುವುದು

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ
ಬರೆಯಿರಿ :

**ಆಡಳಿತ ನಿರ್ವಹಣಾಧಿಕಾರಿ**

**ತಿ. ತಿ. ದೇ. ತಿರುಪತಿ.**



# ಕರ್ನಾಟಕದಲ್ಲಿ

## ವ್ಯಾಸ ಹರಿದಾಸರ ಬಗ್ಗೆ ರಾಷ್ಟ್ರೀಯ ಸಮ್ಮೇಳನ

ಬೆಂಗಳೂರಿನ ಮತ್ತೀಕೆರೆ ಬಡಾವಣೆಯಲ್ಲಿ ಡಿಸೆಂಬರ್ 2–1982 ರಿಂದ ವ್ಯಾಸ ಹರಿದಾಸರ ಬಗ್ಗೆ ಎಂಟು ದಿನಗಳ ರಾಷ್ಟ್ರೀಯ ಸಮ್ಮೇಳನ ನಡೆಯುವುದೆಂದು ವರದಿಗಳು ಬಂದಿವೆ.

ಯಶವಂತ ಪುರದ ಬಳಿಯ ಮತ್ತೀಕೆರೆ ಬಡಾವಣೆಯಲ್ಲಿ ಸಮ್ಮೇಳನಕ್ಕಾಗಿಯೇ ನಿರ್ಮಿಸಲಾಗುವ ಪುರಂದರ ನಗರದಲ್ಲಿ ಹರಿದಾಸ ಸಾಹಿತ್ಯ ಹಾಗೂ ತತ್ತ್ವಜ್ಞಾನಿಗಳ ಬಗ್ಗೆ ಆಸಕ್ತರನ್ನು ತರಬೇತಿ ಗೊಳಿಸಲು ಎರಡು ಶಿಕ್ಷಣ ಶಿಬಿರಗಳೂ ನಡೆಯುವುದೆಂದು ತಿಳಿದು ಬಂದಿದೆ.

ಸಮ್ಮೇಳನದ ವಿವರಗಳನ್ನು ತಿಳಿಸುತ್ತ ಪೇಜಾವರ ಮಠದ ಶ್ರೀಶ್ರೀ ವಿಶ್ವೇಶತೀರ್ಥಸ್ವಾಮೀಜಿ ಅವರು 'ಪಾಜಕ ಕ್ಷೇತ್ರದಿಂದ ಜ್ಞಾನಜ್ಯೋತಿಯನ್ನು ಅಕ್ಟೋಬರ್ 27 ರ ವಿಜಯದಶಮಿಯಂದು ಹಚ್ಚಿ ಅದನ್ನು ಬೆಂಗಳೂರಿಗೆ ತರಲಾಗುವುದೆಂದೂ, ಜಗನ್ನಾಥದಾಸರ ಹುಟ್ಟೂರಾದ ರಾಯಚೂರಿನ ಮಾನವಿಯಲ್ಲಿ ಹರಿದಾಸ ಮೇಳ ನಡೆದು ಅಲ್ಲಿನಿಂದ ಹರಿದಾಸ ಜ್ಯೋತಿಯನ್ನು ಬೆಂಗಳೂರಿನ ಸಮ್ಮೇಳನಕ್ಕೆ ತರಲಾಗುವುದೆ'ಂದೂ ತಿಳಿಸಿದರು.

ಸಮ್ಮೇಳನದಲ್ಲಿ ಎಲ್ಲ ಆಚಾರ್ಯ, ಸ್ವಾಮಿಜೀಗಳೂ ಸೇರುವರೆಂದೂ, ಪಾರಂಪರ್ಯವಾದ ಪೂಜೆ, ಭಜನೆಗಳನ್ನು, ಉಪನ್ಯಾಸಗಳನ್ನೂ ನೀಡುವರೆಂದು ತಿಳಿಯಲಾಗಿದೆ. ಭಾರತ, ರಾಮಾಯಣ, ವೇದ, ಉಪನಿಷತ್‌ಗಳ ಬಗೆಗಿನ ವಿಚಾರ ಸಂಕಿರಣಗಳಲ್ಲಿ ದೇಶಾದ್ಯಂತ ಹರಡಿರುವ ಅಸಂಖ್ಯ ವಿದ್ವಾಂಸರು ಭಾಗವಹಿಸುವರೆಂದೂ, ಜೊತೆಗೇ ಸಾಮೂಹಿಕ ಭಜನೆ, ಅಪರೂಪದ ಧಾರ್ಮಿಕ ಗ್ರಂಥಗಳ ಮಾರಾಟ, ಪ್ರದರ್ಶನ, ಸಾಂಸ್ಕೃತಿಕ ಕಾರ್ಯಕ್ರಮಗಳಿರುವುದೆಂದೂ ಅವರು ತಿಳಿಸಿದರು. (ಆಧಾರ : ಡೆಕ್ಕನ್ ಹೆರಾಲ್ಡ್)

## ಶ್ರೀ ಲಲಿತಾಸಹಸ್ರನಾಮವಾಖ್ಯಾನ

ಶ್ರೀ ಲಲಿತಾಸಹಸ್ರನಾಮ ಬೋಧನ ಹಾಗೂ ವ್ಯಾಖ್ಯಾನದ ಜ್ಞಾನಯಜ್ಞವನ್ನು ಇತ್ತೀಚೆಗೆ ಹದಿನೈದು ದಿನಗಳವರೆಗೆ ಕೋಲಾರದ ಬಿಂದಿ ಮಾಳ್ಯಂ ಕಲ್ಯಾಣ ಮಂಟಪದಲ್ಲಿ ನಡೆಸಲಾಯಿತು. 10–9–1982 ರಂದು ಶ್ರೀಮತಿ ಎನ್. ಅನ್ನಪೂರ್ಣಮ್ಮನವರ ಅಧ್ಯಕ್ಷತೆಯಲ್ಲಿ ಶ್ರೀಮತಿ ವಾಣಿಪ್ರಹ್ಲಾದರಾವ್‌ರವರು ಜ್ಯೋತಿಯನ್ನು ಬೆಳಗುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು. ನಂತರ ಪ್ರತಿನಿತ್ಯ ಸಾಯಂಕಾಲ 6–30 ರಿಂದ 6–45 ರವರೆಗೆ ಪ್ರಾತಃಸ್ಮರಣ ಸ್ತೋತ್ರ, ದೇವೀಸ್ತುತಿ, ತುಲಸೀ–ಅನ್ನಪೂರ್ಣಾ ಸ್ತೋತ್ರಗಳನ್ನು ಬೋಧಿಸಲಾಗುತ್ತಿತ್ತು. 6–45 ರಿಂದ 8–00 ರವರೆಗೆ ಲಲಿತಾಸಹಸ್ರನಾಮದ ಪ್ರತಿಯೊಂದು ನಾಮಾವಳಿಯ ಬೋಧನ ಹಾಗೂ ವ್ಯಾಖ್ಯಾನವನ್ನು ಸ್ಥಳೀಯ ಸರ್ಕಾರೀ ಕಾಲೇಜಿನ ಸಂಸ್ಕೃತ ಉಪನ್ಯಾಸಕರಾದ ಶ್ರೀ ಟಿ. ಎನ್. ಪ್ರಭಾಕರ ನಡೆಸಿ ಕೊಟ್ಟರು. ನಿತ್ಯವೂ ನಿಯತವಾದ ವೇಳೆಗೆ ಪ್ರಾರಂಭಗೊಂಡು ಸಕಾಲದಲ್ಲಿ ಮುಗಿಯುತ್ತಿದ್ದ ಈ ಕಾರ್ಯಕ್ರಮದ ಪ್ರಯೋಜನವನ್ನು ನೂರಾರು ಮಂದಿ ಮಾತೆಯರು ಹಾಗೂ ಪುರುಷರು ಪಡೆದರು.

24–9–82 ರ ಶುಕ್ರವಾರದಂದು ಸಮಸ್ತ ಭಕ್ತರ ಪರವಾಗಿ ಶ್ರೀಮತಿ ಶಾಂತಾ ನಾಗರಾಜ್ ರವರು ಶ್ರೀ ಲಲಿತಾಸಹಸ್ರನಾಮ ತ್ರಿಶತಿ ಅಷ್ಟೋತ್ತರಗಳ ಕುಂಕುಮ ಹಾಗೂ ಪುಷ್ಪಾರ್ಚನೆಯನ್ನು ನೆರವೇರಿಸಿದರು. ಶ್ರೀಮತಿ ವಸಂತ ಎನ್. ಸ್ವಾಮಿಯವರು ಪರಿಚಯಿಸಿದರು. ಕುಮಾರಿ ಸರಸ್ವತೀ ಪುರಾಣಿಕರು ದೇವೀಅಷ್ಟಭುಜಾಸ್ತೋತ್ರವನ್ನು ಬೋಧಿಸಿದರು. ಕೊನೆಯ ದಿನದಂದು ಧ್ಯಾನ ಹಾಗೂ ಪೂಜಾಕ್ರಮವನ್ನು ಬೋಧಿಸಲಾಯಿತು. ಶ್ರೀಮತಿ ಗೀತಾರವರ ವಂದನಾರ್ಪಣೆಯೊಂದಿಗೆ ಕಾರ್ಯಕ್ರಮವು ಮುಕ್ತಾಯವಾಯಿತು. ಶ್ರೀಮತಿ ರಾ. ರುಕ್ಮಿಣೀ ಪುರಾಣಿಕರವರು ಎಲ್ಲ ಶ್ರೋತೃಗಳ ಪರವಾಗಿ ಆಚಾರ್ಯರಿಗೆ ಫಲತಾಂಬೂಲ ಸಮೇತವಾದ ಗುರುದಕ್ಷಿಣೆಯನ್ನು ಅರ್ಪಿಸಿದರು. ಪ್ರತಿನಿತ್ಯವೂ ಸಾರ್ವಕಾಲಿಕ ಮೌಲ್ಯಗಳನ್ನು ಹೊಂದಿದ ಅನೇಕ ಉದ್ಗ್ರಂಥಗಳ ಪ್ರದರ್ಶನ ಹಾಗೂ ಮಾರಾಟವನ್ನು ವ್ಯವಸ್ಥೆ ಮಾಡಲಾಗಿತ್ತು. ಆಯಾ ದಿನದ ಕಾರ್ಯಕ್ರಮಕ್ಕೆ ತಗಲುವ ಖರ್ಚು–ವೆಚ್ಚಗಳನ್ನು ಭರಿಸಲು ಕೋಲಾರದ ಆಸ್ತಿಕರು ಉತ್ಸಾಹದಿಂದ ಮುಂದೆ ಬಂದಿದ್ದರು.

ಅಪೂರ್ವವಾದ ಈ ಕಾರ್ಯಕ್ರಮವನ್ನು ವ್ಯವಸ್ಥೆ ಮಾಡಿದ ಸೇವಿಕೆಯರು ಅಭಿನಂದನಾರ್ಹರಾಗಿದ್ದಾರೆ.

(ಸಾಧಾರ)

## ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಪತಿಯ ಬಳಿಯ ನರಸಿಂಗಾಪುರದಲ್ಲಿನ ತಿ. ತಿ. ದೇ. ಗಳ ಶ್ರೀ ವೆಂಕಟೇಶ್ವರ ವೇದಪಾಠಶಾಲೆಯಲ್ಲಿ ವಿಶೇಷ ಅರ್ಚಕ ತರಬೇತಿ ನೀಡುವ ಈ ಹಿಂದಣ ತೀರ್ಮಾನವನ್ನು ಕೈಬಿಡಬೇಕೆಂದು ನಿರ್ಣಯಿಸಲಾಯಿತು.

* * * * * * * *

ತಿರುಪತಿಯ ಎರಡನೇ ಸತ್ರದ ಬಳಿಯಲ್ಲಿ ಆಂಧ್ರಪ್ರದೇಶದ ಪ್ರವಾಸೋದ್ಯಮ ಹಾಗೂ ಸಮಾಚಾರ ಖಾತೆಗೆ ಅವರ ಕಟ್ಟಡಕ್ಕಾಗಿ 60'×30' ಅಳತೆಯ ಸ್ಥಳವನ್ನು 99 ವರ್ಷಗಳ ಕಾಲ ಗುತ್ತಿಗೆಗೆ ನೀಡಲು ತೀರ್ಮಾನಿಸಲಾಯಿತು.

* * * * * * * *

ತಿರುಮಲೆಯ ಶ್ರೀ ವೆಂಕಟೇಶ್ವರ ಸ್ವಾಮಿಯ ದೇವಾಲಯದಲ್ಲಿ ಕಲ್ಯಾಣೋತ್ಸವ ಮತ್ತಿತರ ಅರ್ಜಿತ ಸೇವೆಗಳಿಗಾಗಿ ಶಾಶ್ವತ ದತ್ತಿಯನ್ನು ನೀಡಿದವರು ಅರ್ಜಿತ ಸೇವೆಗಳ ಶುಲ್ಕ ಹೆಚ್ಚಾದಾಗ ಹೆಚ್ಚಿನ ದತ್ತಿಯನ್ನು ನೀಡಬೇಕೆಂದೂ ಹಾಗೊಮ್ಮೆ ಅವರುಗಳು ನೀಡದಿದ್ದಲ್ಲಿ ಅಂತಹ ಸೇವೆಗಳಿಗೆ ಆಯಾ ಗೃಹಸ್ಥರನ್ನು ಆಹ್ವಾನಿಸಬಾರದೆಂದೂ ತೀರ್ಮಾನಿಸಲಾಯಿತು.

* * * * * * * *

ತಿರುಮಲೆಯಲ್ಲಿ ಸ್ಥಾಪಿಸಬೇಕೆಂದು ಯೋಜನಾ ಹಂತದಲ್ಲಿದ್ದ ವೇಧಶಾಲೆಯ ಸ್ಥಾಪನೆಯನ್ನು ಕೈಬಿಡಲು ತೀರ್ಮಾನಿಸಲಾಯಿತು.

* * * * * * * *

ತಿರುಮಲೆಯ ಶ್ರೀ ವರಾಹಸ್ವಾಮಿ ದೇವಸ್ಥಾನದ ಮೇಲುಚಾವಣಿಯನ್ನು ಬಿಸಿಲು, ಮಳೆ, ಗಾಳಿಗಳಿಂದ ರಕ್ಷಿಸಲು ತೀರ್ಮಾನಿಸಿ ಅದಕ್ಕಾಗಿ ಕರೆದ ಟೆಂಡರ್ ಅನ್ನು ಒಪ್ಪಲು ನಿರ್ಣಯಿಸಲಾಯಿತು.



## ಶ್ರೀ ಗೋವಿಂದ ಪ್ರಸಾದ ನಿಲಯ

ಭಕ್ತಿ ವೇದಾಂತ ಸಂಸ್ಥೆಯ ತಿರುಪತಿ ಶಾಖೆಯವರು ತಿರುಮಲೆಯ ಘಾಟ್ ರೋಡ್‌ನ ಏಳನೇ ಮೈಲಿಯ ಬಳಿ ಕಾಲುನಡಿಗೆಯಲ್ಲಿ ಬೆಟ್ಟವನ್ನೇರುವ ಯಾತ್ರಿಕರಿಗಾಗಿ ಶ್ರೀ ಗೋವಿಂದ ಪ್ರಸಾದ ನಿಲಯವನ್ನು ತಿ. ತಿ. ದೇ. ಸಹಕಾರದೊಡನೆ ಆರಂಭಿಸಿದ್ದಾರೆ. ಗೋವಿಂದನಿಗೆ ನೈವೇದ್ಯಗೊಂಡ ದಧ್ಯೋದನ, ಪುಳಿಯೋಗರೆ ಮೊದಲಾದವು ದೊರೆಯುವ ಈ ಪ್ರಸಾದ ನಿಲಯವನ್ನು ತಿ. ತಿ. ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರು ಈಚೆಗೆ ಉದ್ಘಾಟಿಸಿದರು. ಸರಸವಾದ ದರಗಳಲ್ಲಿ ಲಾಭನಷ್ಟಗಳಿಲ್ಲದ ತತ್ತ್ವದಲ್ಲಿ ಉತ್ಕೃಷ್ಟವಾಗಿರುವ ಉಪಹಾರ ಬೋಜನ, ದೊರೆಯುವ ಈ ಪ್ರಸಾದ ನಿಲಯದಲ್ಲಿ ಕಾಫಿ, ಟೀ, ಮೊದಲಾದವು ದೊರೆಯವು. ಬದಲಾಗಿ ರಾಗಿಮಾಲ್ಟ್, ಬಾದಾಮಿಹಾಲು, ಹಾರ್ಲಿಕ್ಸ್, ಮೊದಲಾದ ಪೌಷ್ಟಿಕ ಪಾನೀಯಗಳು ದೊರೆಯುವುವು. ತಿರುಪತಿಯ ಹರೇಕೃಷ್ಣ ಸಂಸ್ಥೆಯ ಭಕ್ತರು ಇದರ ನಿರ್ವಹಣೆಯನ್ನು ನೋಡಿಕೊಳ್ಳುವರು. ತಿ. ತಿ. ದೇ. ಈ ಪ್ರಸಾದ ನಿಲಯಕ್ಕೆ ಬೇಕಾದ ಕಟ್ಟಡವನ್ನೂ, ಪಾತ್ರೆಗಳನ್ನೂ ಉಚಿತವಾಗಿ ನೀಡಿದೆ.



ಭಕ್ತಿ ವೇದಾಂತ ಸಂಸ್ಥೆಯ ಪುಸ್ತಕವನ್ನು ಸ್ವೀಕರಿಸುತ್ತ ಶ್ರೀ ಕುಮಾರಸ್ವಾಮಿಯವರು

# ವಾರ್ತಾಲಹರಿ

## ತಿ. ತಿ. ದೇ. ಮಾಂಗಲ್ಯ

ಶ್ರೀ ವೆಂಕಟೇಶ್ವರ ಸ್ವಾಮಿ ಹಾಗೂ ಪದ್ಮಾವತೀ ಅಮ್ಮನವರ ಪ್ರತಿಮೆಗಳಿರುವ ಮಂಗಳ ಸೂತ್ರಗಳನ್ನು ತಯಾರಿಸಿ ಮಾರಾಟಮಾಡಬೇಕೆಂದು ತೀರ್ಮಾನಿಸಲಾಗಿದೆ. ತಿ. ತಿ. ದೇ. ಬಳಿಯಿರುವ ಶುದ್ಧ ಮಾಡಿದ ಚಿನ್ನವನ್ನು ಇದಕ್ಕೆ ಬಳಸುವರು. ಶ್ರೀ ವೆಂಕಟೇಶ್ವರ ಸ್ವಾಮಿ ಹಾಗೂ ಶ್ರೀ ಪದ್ಮಾವತಿ ಅಮ್ಮನವರ ಚಿತ್ರಗಳ ಡಾಲರ್‌ಗಳನ್ನು 10 ಗ್ರಾಂ ಹಾಗೂ 5 ಗ್ರಾಂ ತೂಕಗಳಲ್ಲಿ ತಿ. ತಿ. ದೇ. ಈಗಾಗಲೇ ಮಾರಾಟ ಮಾಡುತ್ತಿದೆ. ಈ ಮಾಂಗಲ್ಯದ ತಯಾರಿಕೆಗೆ ದಕ್ಷಿಣದ ಜನ ಬಳಸುವ ಸುಮಾರು 30 ಬಗೆಯ ಮಾದರಿಗಳನ್ನು ಪರಿಶೀಲಿಸಿ ಅವುಗಳಲ್ಲಿ ತಾತ್ಕಾಲಿಕವಾಗಿ 6 ಮಾದರಿಗಳನ್ನು ಆಯ್ಕೆ ಮಾಡಲಾಗಿದೆ. ಒಂದೊಂದು ಮಾಂಗಲ್ಯದ ತೂಕ 4 ಗ್ರಾಂಗಳು. ಮಾಂಗಲ್ಯದ ಎರಡೂ ಕಡೆಗಳಲ್ಲಿ ಸ್ವಾಮಿಯವರ, ಅಮ್ಮನವರ ಚಿತ್ರಗಳ ಗುಂಡುಗಳು (1 ಗ್ರಾಂ) ಇರುತ್ತವೆ. ಬಂಗಾರದ ಡಾಲರ್‌ನಂತೆಯೇ ಪ್ರತಿ ತಿಂಗಳೂ ಬೊಂಬಾಯಿ ಬಂಗಾರದ ಮಾರಾಟದ ದರವನ್ನು ಅನುಸರಿಸಿ ಮಾಂಗಲ್ಯದ ದರವನ್ನು ನಿಷ್ಕರ್ಷಿಲಾಗುತ್ತದೆ. ಹೊಸ ದೆಹಲಿಯ ಸ್ವರ್ಣ ನಿಯಂತ್ರಣ ಅಧಿಕಾರಿಗಳಿಂದ ಅನುಮತಿ ದೊರೆಯುತ್ತಲೇ ಈ ಮಂಗಳಸೂತ್ರಗಳ ತಯಾರಿಕೆ ಆರಂಭವಾಗುತ್ತದೆ ಎಂದು ತಿಳಿದು ಬಂದಿದೆ.

## ಗರುಡಾದ್ರಿ ದತ್ತತೆ

ತಿರುಮಲೆಯ ಸಪ್ತಗಿರಿಗಳಲ್ಲಿ ಒಂದಾದ ಗರುಡಾದ್ರಿಯನ್ನು ಊರ್ಜಿತಗೊಳಿಸುವ ಉದ್ದೇಶದಿಂದ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾದವರು ಅದನ್ನು ಈಚೆಗೆ ದತ್ತು ತೆಗೆದು ಕೊಂಡರು. ಇಲ್ಲಿನ ಕಾಡು ಅಭಿವೃದ್ಧಿ ಕಾರ್ಯವನ್ನು ಮೊದಲಿಗೆ ಕೈಗೊಳ್ಳಲಾಗುವುದು. ಚಿತ್ರದಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾ ಶ್ರೀ ಕುಮಾರಸ್ವಾಮಿ ರೆಡ್ಡಿ, ಸಹ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ವೆಂಕಟೇಶ್ವರುಲು, ತಿ. ತಿ. ದೇ. ಅರಣ್ಯಾಧಿಕಾರಿ ಶ್ರೀ ರಾಜಶೇಖರರೆಡ್ಡಿ, ಪೌರಸಂಬಂಧಾಧಿಕಾರಿ ಶ್ರೀ ರಾವುಲಸೂರ್ಯನಾರಾಯಣಮೂರ್ತಿ, ಎಸ್. ಬಿ. ಐ. ನ ವಿಭಾಗೀಯ ಮುಖ್ಯ ಮ್ಯಾನೇಜರ್ ಶ್ರೀ ವಿ. ಎಸ್. ಪ್ರಸಾದ್ ರಾವ್ ಅವರುಗಳನ್ನು ಕಾಣಬಹುದು.



## ತಿರುಮಲೆಯ ಘಾಟ್‌ರಸ್ತೆಯಲ್ಲಿ ಅಟೋ ಮೊಬೈಲ್ ಕ್ಲಿನಿಕ್

ತಿರುಮಲೆಯನ್ನು ವಿವಿಧ ವಾಹನಗಳಲ್ಲಿ ಸೇರ ಬಯಸುವ ಯಾತ್ರಿಕರು ಸುರಕ್ಷಿತ ಭಾವದಿಂದ ಪ್ರಯಾಣ ಮಾಡಬಹುದಾಗಿದೆ.

ತಿರುಮಲೆಯ ಘಾಟ್ ರಸ್ತೆಯಲ್ಲಿ ಕೆಟ್ಟುನಿಂತ ವಾಹನಗಳನ್ನು ರಿಪೇರಿ ಮಾಡುವ ಸಂಚಾರಿ ದುರಸ್ತಿ ವಾಹನವನ್ನು ಸೆಪ್ಟೆಂಬರ್ 22 ರಂದು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು ಉದ್ಘಾಟಿಸಿದರು. ತಿರುಪತಿಯ ಅಥವಾ ತಿರುಮಲೆಯ

ಟೋಲ್ ಗೇಟಿನಲ್ಲಿ ಈ ದುರಸ್ತಿ ವಾಹನ ವಿವಿಧ ವಾಹನಗಳ ಅತ್ಯಗತ್ಯ ಬಿಡಿಭಾಗಗಳು ಹಾಗೂ ಕುಶಲ ಕೆಲಸಗಾರರಿಂದ ಕೂಡಿ ನಿಂತಿರುವುದು.

ಕೆಟ್ಟುನಿಂತ ವಾಹನಗಳಿಂದ ಟೋಲ್ ಗೇಟಿಗೆ ಸುದ್ದಿ ಬಂದ ಕೂಡಲೇ ಈ ಸಂಚಾರೀವಾಹನ ಸ್ಥಳಕ್ಕೆ ಧಾವಿಸಿ ಸರಸವಾದ ದರಗಳಲ್ಲಿ ದುರಸ್ತಿ ಕಾರ್ಯವನ್ನು ತುರ್ತಾಗಿ ನೆರವೇರಿಸುವುದು.

## ಯಾತ್ರಿಕರ ಸಂಖ್ಯೆಯಲ್ಲಿ ಹೆಚ್ಚಳ

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ದರ್ಶನಕ್ಕೆಂದು ಬಂದ ಯಾತ್ರಿಕರ ಸಂಖ್ಯೆ ಹೋದ ವರ್ಷಕ್ಕಿಂತ ಈ ವರ್ಷ ಹೆಚ್ಚಾಗಿದೆ ಎಂದು ತಿಳಿದುಬಂದಿದೆ. 1981ರ ಜೂನ್ ತಿಂಗಳಲ್ಲಿ 721290 ಮಂದಿ, ಜುಲೈ ತಿಂಗಳಲ್ಲಿ 572426 ಮಂದಿ, ಆಗಸ್ಟ್‌ನಲ್ಲಿ 628148 ಮಂದಿ ಯಾತ್ರಿಕರು ಬಂದಿದ್ದು, 1982 ಅದೇ ತಿಂಗಳುಗಳಲ್ಲಿ ಕ್ರಮವಾಗಿ 743003, 626314, 689162 ಮಂದಿ ಯಾತ್ರಿಕರು ಬಂದಿದ್ದು, ಈ ಮೂರು ತಿಂಗಳಿನ ಹೆಚ್ಚಳ 1¼ ಲಕ್ಷಕ್ಕೂ ಮಿಗಿಲಾಗಿದೆ. ಇದೇ ರೀತಿಯಲ್ಲಿ ಒಟ್ಟು ಆದಾಯವೂ ಈ ಮೂರು ತಿಂಗಳಿನಲ್ಲಿ ರೂ 11,570514–95 (ಜೂನ್ 81) ರೂ 93,97,830–15 (ಜುಲೈ 81) ರೂ 11483170–69 (ಆಗಸ್ಟ 81) ಆಗಿದ್ದರೆ 1982 ರಲ್ಲಿ ರೂ 12557915–17 (ಜೂನ್) ರೂ 11707888–45 (ಜುಲೈ) ರೂ 127 46204–54 (ಆಗಸ್ಟ್) ಆಗಿದೆ.

## ಒಳ ರಕ್ಷಾಪತ್ರ ಚಿತ್ರಸೂಚಿ

1. ಒಂದೇ ದಿನದಲ್ಲಿ 50 ಸಾವಿರಕ್ಕೂ ಮಿಕ್ಕಿದ ಜನರನ್ನು ಆಕರ್ಷಿಸಿದ ತಿರುಮಲೆಯ ಸೆಪ್ಟೆಂಬರ್ ಬ್ರಹ್ಮೋತ್ಸವದಲ್ಲಿನ ಗರುಡೋತ್ಸವ.

2. ದೇವಾದಾಯ ಇಲಾಖೆಯ ನೂತನ ಕಮೀಷನರ್ ಶ್ರೀ ಚಂದ್ರಮೌಳಿರೆಡ್ಡಿ ಐ.ಎ.ಎಸ್ ಅವರೊಂದಿಗೆ ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯರು. ಎಡದಿಂದ ಬಲಕ್ಕೆ ಮೊದಲಸಾಲು ಸರ್ವಶ್ರೀ ವೈ. ವಿ. ರಾಮಿರೆಡ್ಡಿ, ಸೈದಯ್ಯ, ಎನ್. ಸೂರ್ಯ ಪ್ರಕಾಶ

( 40ನೇ ಪುಟ ನೋಡಿ )



ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯದಲ್ಲಿ ಶ್ರೀ ಕೆ. ವಿಜಯಭಾಸ್ಕರರೆಡ್ಡಿ ಹಾಗೂ ಮತ್ತಿತರರು,

## ತಿರುಮಲೆಯಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ

ಆಂಧ್ರಪ್ರದೇಶದ ನೂತನ ಮುಖ್ಯಮಂತ್ರಿ ಶ್ರೀ ಕೆ. ವಿಜಯಭಾಸ್ಕರ ರೆಡ್ಡಿಯವರು ಕುಟುಂಬ ಸಹಿತವಾಗಿ ತಿರುಮಲೆಗೆ ಸೆಪ್ಟೆಂಬರ್ 21 ರಂದು ಆಗಮಿಸಿ ಶ್ರೀ ವೆಂಕಟೇಶ್ವರ ಸ್ವಾಮಿಯನ್ನು ದರ್ಶಿಸಿ ಪೂಜಿಸಿದರು. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ ಮತ್ತಿತರರು ಮುಖ್ಯಮಂತ್ರಿಗಳಿಗೆ ಅಲಯ ಮರ್ಯಾದೆಯಂತೆ ಸ್ವಾಗತ ನೀಡಿದರು. ಶ್ರೀ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವದ ಅಂಗವಾಗಿ ತಿ. ತಿ. ದೇ. ಉದ್ಯಾನವನ ವಿಭಾಗದ ಫಲ ಪುಷ್ಪ ಪ್ರದರ್ಶದಲ್ಲಿ ಮುಖ್ಯಮಂತ್ರಿ ಭಾಗವಹಿಸಿ ಸಾಳ್ವ ನರಸಿಂಹ ರಾಯ ಹಾಗೂ ವೇಮನ ಎಂಬ ಎರಡು ಹೊಸ ಕಸಿ ಮಾಡಿದ ಕ್ರೋಟನ್ಸ್‌ಗಳನ್ನು ನೆಟ್ಟರು. ರಾಜ್ಯ ಶಾಸನ ಸಭಾಧ್ಯಕ್ಷ ಶ್ರೀ ಅಗರಾಲ ಈಶ್ವರರೆಡ್ಡಿ ಅವರೊಂದಿಗೆ ಫಲ ಪುಷ್ಪ ಪ್ರದರ್ಶನವನ್ನು ನೋಡಿ ಆನಂದಿಸಿದರು.

ಫಲ ಪುಷ್ಪ ಪ್ರದರ್ಶನದಲ್ಲಿ ಶ್ರೀ ಕೆ. ವಿಜಯಭಾಸ್ಕರರೆಡ್ಡಿ ಹಾಗೂ ಅಗರಾಲ ಈಶ್ವರರೆಡ್ಡಿ ಅವರು



# ಡಿಸೆಂಬರ್ ತಿಂಗಳಿನ ಮುಖ್ಯ ದಿನಗಳು

| | | |
|---|---|---|
| 1. | ಬುಧವಾರ | ತಿರುಪ್ಪಾಣಾಳ್ವಾರ್ ವರ್ಷ ತಿರುನಕ್ಷತ್ರ |
| 13. | ಸೋಮವಾರ | ಶ್ರೀ ಕಪಿಲೇಶ್ವರಸ್ವಾಮಿ ಸನ್ನಿಧಿಯಲ್ಲಿ ಕಾರ್ತೀಕ ಸೋಮವಾರ ಅಭಿಷೇಕ |
| 15. | ಬುಧವಾರ | ತಿರುಮಲೆಯ ಶ್ರೀಸನ್ನಿಧಿಯಲ್ಲಿ ಅಧ್ಯಯನೋತ್ಸವಾರಂಭ |
| 16. | ಗುರುವಾರ | ಧನುರ್ಮಾಸ ಪೂಜೆ ಪ್ರಾರಂಭ |
| 25. | ಶನಿವಾರ | ತಿರುಮಲೆಯಲ್ಲಿ ಪಗಲ್ ಪತ್ತು ಶಾತ್ತುಮೊರೆ |
| 26. | ಭಾನುವಾರ | ವೈಕುಂಠ ಏಕಾದಶಿ, ಗೀತಾಜಯಂತಿ |
| 27. | ಸೋಮವಾರ | ಮುಕ್ಕೋಟಿ ದ್ವಾದಶಿ,<br>ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವಾರಂಭ,<br>ಸ್ವಾಮಿಪುಷ್ಕರಿಣೀ ತೀರ್ಥ ಮುಕ್ಕೋಟಿ |
| 29. | ಬುಧವಾರ | ಶ್ರೀ ಕಪಿಲೇಶ್ವರಸ್ವಾಮಿ ತೆಪ್ಪೋತ್ಸವ ಸಮಾಪ್ತಿ<br>ದತ್ತಾತ್ರೇಯ ಜಯಂತಿ |
| 30. | ಗುರುವಾರ | ಚಂದ್ರಗ್ರಹಣ. |



(39ನೇ ಪುಟದಿಂದ)

ರಾವ್, ಬಿ, ನಾಗಿರೆಡ್ಡಿ (ಅಧ್ಯಕ್ಷರು) ಶ್ರೀಮತಿ ಕೆ. ಪ್ರಭಾವತಮ್ಮ, ಕೆ. ವೀರಾರೆಡ್ಡಿ, ಎರಡನೆಯ ಸಾಲು. ಸರ್ವಶ್ರೀ ಜಿ. ಕುಮಾರಸ್ವಾಮಿರೆಡ್ಡಿ (ಕಾರ್ಯನಿರ್ವಹಣಾಧಿಕಾರಿ), ಆರ್.ಪಿ. ಗೋಯಂಕ, ಆರ್. ಸಾಂಬಶಿವರಾವ್, ಎಂ. ಚಂದ್ರಮೌಳಿರೆಡ್ಡಿ, ಬಿ. ಸತ್ಯನಾರಾಯಣ, ಎಚ್. ಆರ್. ಬಸವರಾಜ್.

3. ಗರುಡೋತ್ಸವದ ಉತ್ಸವಮೂರ್ತಿಯ ಅಲಂಕರಣಕ್ಕಾಗಿ ಲಕ್ಷ್ಮೀಹಾರ, ಮಕರಕಂಠಿ ಆಭರಣ ಮೊದಲಾದವುಗಳನ್ನು ಮೆರವಣಿಗೆಯಲ್ಲಿ ಹೊರತರುತ್ತ ಶ್ರೀ ಕುಮಾರಸ್ವಾಮಿರೆಡ್ಡಿ ಮೊದಲಾದವರು.

4. ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ವಿಜಯಭಾಸ್ಕರರೆಡ್ಡಿ ಹಾಗೂ ಅವರ ಕುಟುಂಬದೊಡನೆ ಶ್ರೀ ಕುಮಾರ ಸ್ವಾಮಿ ರೆಡ್ಡಿ.

5. ಶ್ರೀನಿವಾಸನ ಜಗನ್ಮೋಹಕ ಮೋಹಿನೀ ಅವತಾರ. ಪಲ್ಲಕ್ಕಿಗೆ ಹೆಗಲು ನೀಡಿ ನಡೆದಿರುವವರು ಶ್ರೀ ಕುಮಾರಸ್ವಾಮಿ ರೆಡ್ಡಿ ಮತ್ತಿತರರು.

6. ಬ್ರಹ್ಮೋತ್ಸವದಲ್ಲಿನ ಫಲ ಪುಷ್ಪಪ್ರದರ್ಶನ ಉದ್ಘಾಟನೆಯಲ್ಲಿ ಶ್ರೀ ಕುಮಾರ ಸ್ವಾಮಿ ರೆಡ್ಡಿ, ಸಹಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ವೆಂಕಟೇಶ್ವರಲು, ಪುಷ್ಪವನವಿಭಾಗಾಧಿಕಾರಿ ಶ್ರೀ ತಮ್ಮಣ್ಣ.

7. ಕ್ರೋಟನ್ ವನವನ್ನು ಉದ್ಘಾಟಿಸಿದ ಆಂಧ್ರಪ್ರದೇಶದ ಮುಖ್ಯಮಂತ್ರಿ ಹಾಗೂ ಮತ್ತಿತರರು.

8. ಫಲಪುಷ್ಪ ಪ್ರದರ್ಶನದಲ್ಲಿನ ಒಂದು ದೃಶ್ಯ.

9. ಬ್ರಹ್ಮೋತ್ಸವದಲ್ಲಿನ ಊಂಜಲ್ ಸೇವೆಯ ಚಿತ್ರ.

Edited and Published on behalf of the T. T. Devasthanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

Regd No. H/TRP 14 

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯುನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

### ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ಓಂ ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ.